ಕೈಕೊಳುತ ॥ ಸಲ್ಲುವಾಶಿವತತ್ತ್ವಬೋಧೆಯ । ನೆಲ್ಲರಿಗೆತಿ
ಳುಪುತ್ತ ಯತಿಗಳ । ವಲ್ಲಭಂ ನಡೆತಂದುಕಂಡನು ಕಕ್ಷಿ
ಗೀಪುರವಾ ॥೨೫॥

ಶ್ರೀಗೆ ನೆಲೆಯಾಗಿರ್ದ ಕುಕ್ಷಿಗಿ । ಭೋಗಿಗಳಿಗಾ
ವಾಸವಾಗಿಯು । ನಾಗಲೋಕವುದಲ್ಲ ವಿಬುಧವಿತಾನ
ದಿಂದಿರ್ದೂ ॥ ಈಗಿದಮರಾವತಿಯುದಲ್ಲವು । ತ್ಯಾಗಿಗ
ಳು ಶಿವಯೋಗಿಗಳು ಸುವಿ । ರಾಗಿಗಳು ಶಿವಭಕ್ತಿಯಿಂ
ಮೆರೆದಿಪ್ಪರಾಪುರದೀ ॥೨೬॥

ಪುರದಮುಂಬಿನಬಯಲೊಳಾಗುರು । ವರನುಮೆ
ರೆವ ಕುಟೀರಮಧ್ಯದಿ । ಪರಮಜೀವರನೊಂದುಗೂಡಿಸಿ
ಪೂರ್ಣಸುಖದೊಡನೆ ॥ ಪೊರಗಣರಿವಂಮರೆದು ಲಿಂಗ
ದೊ । ಳಿರಿಸಿಮನವನು ದೇಹಧರ್ಮವ । ತೊರೆದುಶಂಕ
ರಯೋಗದೊಡನಿಹ ಯೋಗಿಪುಂಗವನೂ ॥೨೭॥

ಇರುತಿರಲು ನಾಪುರದ ಪಾಮರ । ನರರು ಯತಿ
ಗಳಕಂಡುಮಿವರಾ । ರಿರುವರಿಲ್ಲಿಯೆ ಮಿಸುಗದಂದದಿ
ಕುಳಿತಿಪರದೆಂದೂ ॥ ಭರದಿ ಬಳಿಗಂಬಂದು ಗರ್ಜಿಸಿ ।
ಕರೆದಡುಂ ಮಾರ್ನುಡಿಗಳಿಲ್ಲದ । ತೆರನರಿದು ಪೆಣನೆಂದು
ಭಾವಿಸಿ ಮುಟ್ಟಲೈತರಲೂ ॥೨೮॥

ತಪದಜ್ವಾಲೆಯು ಸುಡುತಿರಲುಜನ । ರಪರಿಮಿತ
ಭಯದಿಂದ ನಡುಗುತ । ಲುಪಮಿಸಲ್ಬಾರದಮಹಾತ್ಮರಿ
ವೆಂದು ಪೊಡಮಡುತೆ ॥ ತಪನನಂ ಪಳಿಕೈಪಗುರುವಿನ ।
ವಪುವಸೋಂಕಲು ಶಕ್ಯವಲ್ಲವು । ಶಪಿಸುವರು ನಾವಿಲ್ಲಿ
ನಿಂದೊಡೆನುತ್ತ ತೆರಳಿದರೂ ॥೨೯॥

ಬಂದುಪುರದೊಳಗೆಲ್ಲವಾರ್ತೆಯ । ನೊಂದುಳಿಯ ದಂತುಸುರೆ ಸರ್ವರು । ವೃಂದವೃಂದಂಗೂಡಿ ನಡೆದರು ನೋಡಬೇಕೆಂದೂ ॥ ಇಂದುಶೇಖರಗುರುವಿನನುಪಮ । ವೆಂದೆನಿಪಯೋಗವನು ಕಾಣುತ । ಮಂದಬುದ್ಧಿಯ ಮಾನವರು ಪಲವಾತನಾಡಿದರೂ ॥೩೦॥

ಕೆಲರು ಭೂತದಚೇಷ್ಟೆಯೆನುವರು । ಕೆಲರು ರೋಗಗ್ರಸ್ತನೆನುವರು । ಕೆಲರು ಮರುಳನು ಮೋಸಗಾರನು ಕಳ್ಳನೆನುತಿಹರೂ ॥ ಕೆಲರು ಚಾಡಿಯುಗೈವನೆನುವರು । ಕೆಲರು ಅಂಜನಸಿದ್ಧನೆನುವರು । ಕೆಲರು ಕಾಮುಕ ಕುಣಪ ವ್ರತಿ ಮಹಜ್ಞಾನಿಯೆನ್ನುವರೂ ॥೩೧॥

ಇಂತುಪಲನಾಲೋಚಿಸುತಜನ । ತಿಂತಿಣಿಯುವೇಗದೊಳು ಗುರುವಿನ । ಮುಂತೆಬರೆ ಸುಡುತಿರ್ಪತಪಸಿನ ಜ್ವಾಲೆಗತಿಬೆದರೀ ॥ ಪಿಂತೆಸರಿದುಂ ಯೋಗಿನಾಥರ । ಸಾಂತಕುಮ್ಮಳವಿಾವುದನುಚಿತ । ಕಂತುಹರನ ಪರಾವತಾರರುಮೆಂದು ನಿರ್ಧರಿಸೀ ॥೩೨॥

ದೂರದೊಳು ಮೈಯ್ಯಿಕ್ಕಿ ನಮಿಸುತ । ನಾರಿಕೇಳಂ ಖರ್ಜುರಡಿಕೆಯು । ವಾರಿಜಂಗಳನಿಟ್ಟು ಕರ್ಪುರಮಾಜ್ಯವರ್ತಿಗಳಾ ॥ ಆರತಿಯುಪಿಡಿದೆತ್ತಿ ಭಕ್ತಿಯ । ಪಾರವಶ್ಯದಿ ನುತಿಸಿ ಮನಸಿನ । ಕೋರಿಕೆಯು ಸಂಪೂರ್ಣಸಿದ್ಧಿಸಲೆಂದು ಬೇಡುತ್ತೆ ॥೩೩॥

ತೆರಳಿದರು ತಮ್ತಮ್ಮ ನಿಳಯಕೆ । ಗುರುವಿನನುಪಮ ಮಹಿಮೆಪೊಗಳುತ । ಪರಮತಪಸಿನವಾರ್ತೆಪರ್ಬಿ

ತು ದಿಕ್ಕುದಿಕ್ಕಿನಲೀ ॥ ಹರುಷದಿಂ ನೋಡಲ್ಕೆಬಂದರು। ತರುಣಿಪುತ್ರರು ಮಿತ್ರರೊಡನಂ । ಪರಸಿಪರಸಿಯು ಜನರು ದೂರದದಾರಿಯುಂ ನಡೆದೂ ॥೩೪॥

ಗುರುವರನ ಯೋಗವನು ಕಾಣುತ । ಹರುಷದಿಂ ಪೊಡಮಟ್ಟು ಸರ್ವರು । ಕರಮುಗಿದು ನುತಿಸುತ್ತ ತಮ್ಮಯ ಪರಕೆಗಳಬೇಡೀ ॥ ಹರಗಣಾರಾಧನೆಯುನೆಸಗುತ। ಪರಿಪರಿಯದಾನಗಳನೀಯುತೆ । ದುರಿತರಾಶಿಯ ಕಳೆವ ಶಿವರೆಂದೆನುತೆ ಬಣ್ಣಿಪರೂ ॥೩೫॥

ಬರುವಹೋಗುವಜನರ ಸಂಖ್ಯೆಯ । ಪರಿಗಣಿಸಿ ಪೇಳಲ್ಕೆಯುಸದಳ। ನೆರವಿಯುನಿತೆನಿತಿರ್ದೊಡೆಂ ಶಿವಯೋಗಿಪುಂಗವನೂ ॥ ಪೊರಗಣರಿವಿಲ್ಲದಲೆಯಾತ್ಮನ । ವೆರಸಿ ಸುಖಮಯನಾಗಿ ಕುಳಿತಿಹ । ಪರಿಯನೆಲ್ಲವನುಸುರಲೀ ಜಡಮತಿಗೆ ವಶವಹುದೇ ॥೩೬॥

ಶ್ರೀಗುರುವಿನಡಿಗಂಡುಬಹುಪರಿ । ರೋಗಪೋದವು ಮಯ್ಯೊಳಡಗಿದ । ಮೋಗೆನಿಪಪಿರಿತಿನಿಗಳೆಲ್ಲವು ಭಯದಿನಡಗುತಲೀ ॥ ಕೂಗಿಪೋದವು ಜನರಮನಕನು । ರಾಗಮೊದಗಲು ನುತಿಸಿನಡೆದರು । ಮಾಗಳಾಕುಷ್ಟಿಗೆಯ ಭಕ್ತರಮುದವು ಪೆರ್ಚಿದುದು॥೩೭॥

ಶಿವನಬರಿಜಂಬಡೆದಯೊಗಿಗೆ । ಯುವಿರತಂ ತೊಂದರೆಯುಬಾರದೊ । ಲವರು ನೀರುತಂ ಬಂಧುಭಯುಭಕ್ತಿಯೊಳು ಭಜಿಸುತಿರೆ ॥ ಸವನಿಸಿತು ಕಾಗ್ರಾಲಜಲಧರ । ನಿವಹಮಾಕಾಶದೊಳು ಮುಸುಗುತ । ಭುವಿಗೆ ಮಳೆಗರಿಯಲ್ಕೆ ಕೃಷಿಕರು ಬಿತ್ತತೊಡಗಿದರೂ ॥೩೮॥

ಸಸಿಗಳಿಂದಿಳೆಪೂರ್ಣವಾಗಿರೆ । ಸಸಿನೆಯಿಂದೊ
ಕ್ಕಲಿಗಜನಗಳು । ಕೃಷಿಗೆಲಸವೆಸಗುತಿಹಸವುಯದೊ
ಳಾಯತೀಶ್ವರನು ॥ ಶ್ವಸನನಂತಿರುಗಿಸುತ ಮೆಲ್ಲನೆ । ಪೊ
ಸಪರಿಯ ಯೋಗವನುತೀರಿಸಿ । ಅಸಮನಯನನ ಭಜಿ
ಸುತಿರ್ದನು ಪರಮಶಿವಯೋಗಿ ॥೩೯॥

ಅಸಿತರೊಳಗಾಪುರದಭಕ್ತರು । ಅನುನಯದೊಳೈ
ತಂದು ನೋಡಲು । ಘನಗುರುಗಳೆಚ್ಚತ್ತು ಶಿವನಂಭಜಿ
ಸುತಿರೆಕಂಡು ॥ ವಿನಯದಿಂ ಪೊಡಮಟ್ಟು ಮಸ್ತಕ । ವ
ನು ನಮಿಸಿ ಕರಮುಗಿದುನಿಂದಿಹ । ಜನರಿಗಾಶಿರ್ವದಿಸಿ
ಕಾರುಣ್ಯವನು ಬೀರಿದರೂ ॥೪೦॥

ಗುರುಗಳಾರೆಂಬುದನುತಿಳಿದತಿ । ಹರುಷದಿಂಶ್ರೀ
ಗಿರಿಯಲಿಂಗವೆ । ಚರನವೇಷಂದಳೆದುಬಂದಿಹನೆಂದು
ನಂಬಿದರು ॥ ಪುರದಜನರುಂ ಬಂದುನಮಿಸಲು । ಕರು
ಣದಿಂ ಶಿವತತ್ತ್ವಮರುಪುತ । ಪರಿಪರಿಯುಬಯಕೆಗಳನ
ಡೆಸುತ ಮೆರೆದನಾಯತಿಯೂ ॥೪೧॥

ಅಂಗಲಿಂಗದ ಸಮರಸವನೆಮ । ನಂಗೊಳಿಸಿ ಸಕ
ಲರ್ಗೆ ಶಿವಮತ । ದಿಂಗಿತವನರುಪುತ್ತ ಭಕ್ತಿಜ್ಞಾನವಿರತಿ
ಯನೂ ॥ ಸಾಂಗವಾಗಿಯೆ ತಿಳುಪಿ ಮುಕುತಿಯ । ಸಂ
ಗಸುಖಮಿಂತೆಂದು ತೋರಿಸಿ । ಅಂಗಜಾರಿಯಶರಣರ
ನುಪಮ ಚರಿತೆಗಳನುಸುರ್ದ ॥೪೨॥

ಎಂದು ಪರಿಪರಿವರ್ಣಮಬೋಧೆಯ । ನಂದುತಿ
ಳುಪುತ ಚರಣಕಮಲವ । ಪೊಂದಿದವರಘಕುಳವ ಕಳೆ

ಯುತ ಭಕ್ತರಭಿನುತವಾ ॥ ಛಂಧದಿಂ ನಡಸುತ್ತಪ
ವಾ । ನಂದದಿಂ ಗುರುರಾಯನೊಪ್ಪೆ ವ । ಸುಂಧ
ಯೊಳೊಂದದ್ಭುತಂ ತೋರ್ದತ್ತದೇನೆನಲೂ ॥೪೩॥

ಮಳೆತಡೆದು ಬೆಳೆಯೊಣಗಿಪೋದವು । ಪೊಳ
ಳುಂ ಕೆರೆಕೂಪವನರತವು । ನಳಿನಸಖನತ್ಯುಗ್ರಕಿರಣದ
ಪಪೆರ್ಚಿದುದೂ ॥ ಇಳೆಯಜನವತ್ಯಂತಕಷ್ಟದಿ । ಕಳ
ಳಿಸತೊಡಗಿತ್ತು ಕೃಷಿಕರ । ಬಳಗತಮ್ಮಯ ಕಾರ್ಯಸಾ
ಗದೆ ದುಃಖಿಸುತ್ತಿಹರೂ ॥೪೪॥

ಎಲ್ಲಿ ನೋಡಿದಡಲ್ಲಿಯುಂ ಮಳೆ । ಯಿಲ್ಲವೆಂಬ
ನುಡಿಯೆ ನಡೆದುದು । ತಲ್ಲಣಿಸಿ ಜನಸಂಕುಳಂ ಗುರು
ದೇವನಿರ್ದೆಡೆಗೇ ॥ ಮೆಲ್ಲನೈತಂದಖಿಳಕಷ್ಟವ । ಸೊಲ್ಲಿಸು
ತೆ ಕರುಣಾಂಬುರಾಶಿಯೆ । ಸಲ್ಲಲಿತವೃಷ್ಟಿಯನು ಸುರಿಸ
ಜಗವಸಲಹೆಂದು ॥೪೫॥

ಕೂಡಿದವರತಿ ದೈನ್ಯದಿಂ ಕರ । ಜೋಡಿಸುತ ಪ
ಪರಿಯನುತಿಗಳ । ಮಾಡುತಿರೆಕಂಡೆಲ್ಲರಂ ಸಂತೈಸಿಗುರು
ರಾಯಾ ॥ ನಾಡೆ ಕರದತ್ರಿಶೂಲವುಂ ಮುದ । ಗೂಡಿ
ರೆಯೊಳ್ನಿಲಿಸಿ ಜಲವುಂ । ನೀಡರಿದು ಚಿಗಿಯಲ್ಕೆ ಮ
ತಾಂಸುರಿವುದೆಂದೆನಲೂ ॥೪೬॥

ನಂಬಿದರು ಗುರುವಾಕ್ಯಮಾಗಳೆ । ತುಂಬಿತಂ
ರು ನೀರಘಟಗಳ । ಮುಂಬಿನೊಳ್ನಿಲಿಸಿರ್ದ ಉಕ್ಕಿನಶೂ
ಕಂ ಮುದದೀ ॥ ಅಂಬುರಾಶಿಯನೆರದು ಪೊಡಮಡೆ
ಕುಂಭಿನಿಗೆಪೊಸತೆನಲು ಕೊನರ್ತುದು । ಅಂಬರದೊಳ
ಡ್ಡೈಸಿಬಂದವು ನೀಲಮೇಘಗಳೂ ॥೪೭॥

ಸುತ್ತಲುಂ ಕವಿದೆಸೆವಜಲಧರ । ವೊತ್ತಡೊಳು ಸೆಳೆಮಿಂಚುಗರ್ಜಿಸು । ತೆತ್ತಲುಂ ಸುರಿದತ್ತು ಪೇರ್ಮಳೆ ಧರೆಯಜನಕಾಗಾ ॥ ಚಿತ್ತದೊಳಗಾನಂದ ಮೊಳೆತು ದು । ಉತ್ತಮರುಪೊಸತೆಂದುನುತಿಸಲು । ವುತ್ತೆಯತಿಶ ಯವೃಷ್ಟಿಗರೆದುದನೇನಪೊಗಳುವೆನೂ ॥೪೮॥

ಬಿರುಮಳೆಯು ಸುರಿವುತಿರೆ ಪಾಂಥರ । ಶರಿರವೆ ಲ್ಲವು ತೋದು ಶ್ವಾಸವು । ತಿರುಗದಲೆ ವೃಕ್ಷಗಳನಾಲಿಂಗಿ ಸುತೆ ನಿಲ್ಲುವರೂ ॥ ಕರಕಗಳು ಬೀಳುವವು ತರುಗಳು । ಮುರಿಯುತೊಡಗಿದವೆಲ್ಲಜನಗಳು । ಗುರುಗಳನುಪಮ ಮಹಿಮೆಯಂ ಪೊಸತೆಂದು ಪೊಗಳಿದರೂ ॥೪೯॥

ಗುರುನಿರೂಪಣದಂತೆಲೋಹದ । ಮೆರೆವತಿಸ್ಥುಳಂ ಚಿಗುರ್ತುರ್ಪಾಗಳೆ । ಧರೆಯೊಳುತ್ತಮಮಳೆಯು ಸುರಿ ದುದು ಸರ್ವಜನರಾಗಾ ॥ ಹರುಷದೊಡನೈತಂದು ಚರ ಣಕೆ । ಪರಿಪರಿಯ ಕಾಣಿಕೆಯನೀಯುತ । ಸರಸಮಾಧು ರ್ಯೋಕ್ತಿಯಿಂ ನುತಿಗೈದರಿಂತೆಂದು ॥೫೦॥

ಮೊರಟದೊಳು ಶಿವಬಂಕಿದೇವನು । ಕೊರಡುಕೊ ನರ್ಚಿದನಂತೆ ಮಳೆಯಂ । ಬರಸಿದನು ಪಗಲ್ಪೋಳಭೂ ಮಿಪಾಲನೆಂಬುವನೂ ॥ ಕರಿಬಸವಯತಿರಾಜನುಕ್ಕಿನ । ಪರಮಶೂಲವಚಿಗುಸಿ ವರ್ಷವ । ಸುರಿಸಿದೀಪ್ರತ್ಯಕ್ಷಮ ಹಿಮೆಯ ಕಂಡೆವೆನುತಿಹರೂ ॥೫೧॥

ಮೂಜಗವಮೋಹಿಸುವ ಮಯಣನ । ನೈಜಸೃ ಷ್ಟಿಯನೆಸಪಬೊಮ್ಮನ । ನಾಜವನಸಾಮರ್ಥ್ಯಮಂ ಪಳಿ

ಕೈದುನಿಜತಪದಾ ॥ ತೇಜದಿಂಪೊಸತಪ್ಪ ಚರಿತೆಯ । ನೀ ಜಗಕೆ ತೋರಿಸಿದ ಗುರುಕುಲ । ರಾಜನಂಫ್ರಿಯುಸೇರಿದ ವನೇ ಧನ್ಯನೆನಿಸುವನೂ ॥೫೨॥

ಎಂದುಪಲವಂದದಲಿ ನುತಿಸಿ ವ । ಸುಂಧರೀಪತಿ ಕೃಷ್ಣರಾಜಗೆ । ಛಂದದಿಂ ತಿಳುಪಿದರುಸರ್ವಮನೋಲ ಮುಖದಿಂದಾ ॥ ಬಂದು ರಾಜನುಗುರುಗಳಿಡಿಗಂ । ವಂ ದಿಸುತ ಕೊನರ್ತಿಸೆವತಿಸುಳವು । ನಂದುಕಂಡಾನಂದದಿಂ ಪೊಸತೆಂದುಪೊಗಳಿದನೂ ॥೫೩॥

ಧರಣಿಪತಿ ಕುಷ್ಟಿಗಿಯ ಭಕ್ತರ । ವರಮನೋರಥ ದಂತೆಪೂರದೊಳು । ಪಿರಿಯಮಠಮಂರಚಿಸಿ ಗುರುವಿಂ ಗೊಪ್ಪಿಸುತೆ ಮುಂದೆ ॥ ಶರಿರಭೋಗದಸಾಧನಕೆಮಹ । ಕರೆಯುಕೆರೆಪೊಲಮಿತ್ತು ಶೂಲವ । ಮೆರೆವಕ್ಷೇತ್ರವ ಕೊ ಟ್ಟುನುಹಿಮರ ಚರಣಗಳನುತಿಸೀ ॥೫೪॥

ಹರಿತವರ್ಣದ ಪಟ್ಟುಕಂಥೆಯು । ನಿರುತರಾಜಿ ಸುತಿರಲಿ ನಿಮ್ಮಯ । ಶರಿರದೊಳಗಿದಕೆಂದೆ ಕೊಡುವೆನು ಪಟ್ಟುಕಂಥಿಹೊಲ ॥ ಬಿರುದಿನೊಳು ಶ್ರೀಪಟ್ಟುಕಂಥೆ ಯು । ಮೆರೆವುತಿರಲೆಂಬುದನೆ ಲಿಖಿಸುತ । ನರಪತಿಯು ನಿಜಮುದ್ರೆಯುಂಗುರವೊತ್ತಿ ವಿನಯದೊಳೂ ॥೫೫॥

ನಮಿಸಿ ಮನ್ನಣೆಪತ್ರವೊಪ್ಪಿಸಿ । ವಿಮಲಚರಿತರಕೃಪೆಯನಾಂತು ವ । ಸುಮತಿಯೊಡೆಯಂ ಪೋದನತ್ತಲು ಯಿತ್ತ ಗುರುವರನೂ ॥ ಅಮಿತಶಿಷ್ಯರ್ವೆರ್ಣಸಿ ನಿತ್ಯವು । ಕ್ರಮವರಿತು ಶಿವಲಿಂಗಪೂಜೆಯ । ಸುಮನದಿಂದೆಸಗುತ್ತ ಮಠದೊಳಗಿರ್ದರತಿಮುದದೀ ॥೫೬॥

ಸಿಡುಶಶಿಯೊಳೊಂದಧಿಕ ಮಠವುಂ । ನೊಡರಿ ಚತಲಲ್ಲಿಪ್ಪ ಭಕ್ತರು । ಸಡಗರದಿ ಕರಿಬಸವದೇವಂಗೊಪ್ಪಿಸಿದರಾಗಾ ॥ ಬಿಡದಲೆರಡುಂ ಮಠದಿ ಶಿಷ್ಯರ । ಗಡಣಮಿರುತಿರೆಮೂರುಕಾಲದಿ । ಮಿಡನಪೂಜೆಯುನೆಸಗುತಂ ಶಿವತತ್ತ್ವಮಾರ್ಗವನೂ ॥೫೭॥

ಬೋಧಿಸುತ ನಿಜಪದವನಂಬಿದ । ಸಾಧುಗಳಿಗಭಿಮತವ ನೀವುತ । ಮೋದದಿಂಷಟ್‌ಸ್ಥಲವ ಸಲಹುತ್ತಂಗಲಿಂಗಗಳಾ ॥ ಭೇದವರಿದಖಿಳಾಕ್ಷಭೋಗವು । ನಾದಿಗುರುಲಿಂಗಗಳಿಗರ್ಪಿಸು । ತಾದಿದೇಶಿಕ ಸಾರ್ವಭೌಮನು ಸುಖದೊಳೊಪ್ಪಿಹನೂ ॥೫೮॥

ನಡೆಯುಲಿಂಗವು ನುಡಿಯುಲಿಂಗವು । ಕೊಡುವ ಕೊಂಬುವದೆಲ್ಲಲಿಂಗವು । ಒಡಲ ಭೋಗದಪಡಿಪದಾರ್ಥಗಳೆಲ್ಲಲಿಂಗಗಳೂ ॥ ಪೊಡವಿವಿತ್ತವುಮಠವು ಮನ್ನಣೆ । ಗಡಣವ ಖಿಳವಲಿಂಗಮುಖದಿಂ । ದೊಡನೆಗ್ರಹಿಸುವಸಚ್ಚರಿತ್ರರ ಪೊಗಳಲಸದಳವೂ ॥೫೯॥

ಕೋಕಿಲವೃತ್ತ ॥ ಆಗಮಂಗಳನೊಲ್ದು ಕೇಳಲು ಪೇಳ್ದಶಂಕರನಾದಿಯೋಳ್ । ರಾಗದಿಂ ಶರಣರ್ಗೆ ಸಾಧನಮಾಗಿರಂಜಿಪನಾಗಳುಂ ॥ ಭೋಗಮೋಕ್ಷವ ನೀವ ಮಾತೆಯೆ ಜ್ಞಾನಶಕ್ತಿಪರಾತ್ಪರೀ । ಶ್ರೀಗಿರಿಭ್ರಮರಾಂಬ ಪಾಲಿಸು ಪ್ರೇಮದಿಂ ನುತಿಗೈವೆನೂ ॥೬೦॥

ಭಾ. ಷ. ಇದುವೆ ಶ್ರೀಗುರುಚನ್ನಬಸವನ । ಸದಮಲದ ಚಾರಿತ್ರ್ಯವತಿಶಯ । ಮುದದಿಪೇಳ್ದಂ ರಾಚವೀಟಯು

ಶಾಂತವೀರಾಖ್ಯಂ ॥ ಪದುಳದಿಂ ಕೇಳ್ವವರಬಯಕೆಯ
ನೊದವಿಸುವನಾಮಲ್ಲಿಕಾರ್ಜುನ । ಸದಯಮಾನಸದಿ
ದಲಿಲ್ಲಿಗೆ ನಾಲ್ಕನೆಯಸಂಧೀ ॥೬೧॥

ಇಂತು ಚತುರ್ಥಾಧ್ಯಾಯಕ್ಕೆ ಮಂಗಲಂ

## ಅಥ ಪಂಚಮಾಧ್ಯಾಯ ಪ್ರಾರಂಭಃ



ಸೂಚನೆ:- ಭಿತ್ತಿಯನು ಗಜದಂತೆನಡೆಸುತ
ಮತ್ತೆನದಿಯಂ ದಾಂಟಿಸುವನುಸ
ಮ । ವೆತ್ತಮಹಿಮೆಯತೋರ್ದು
ಮಠಗಳ ಗೈದರಲ್ಲಲ್ಲೀ ॥

ವೇದ ಶಾಸ್ತ್ರಾಗಮ ಪುರಾಣಗ । ಳಾದಿಯಿಂಪ
ರಸುತ್ತಕಾಣದೆ । ವೋದದಿಂದಗಣಿತನಗೋಚರನೆಂ
ದು ನುತ್ತಿಸುವವೂ ॥ ಮೇಧಿನಿಯೊಳಾನೆನಿತರವನೈ ।
ಶ್ರೀದಯಾನಿಧಿಭಕ್ತವತ್ಸಲ । ಭೂಧರೇಂದ್ರನಿವಾಸ ರಕ್ಷಿ
ಸು ಮಲ್ಲಿಕಾರ್ಜುನನೇ ॥೧॥

ಶಿವಮನುವ ಪಠಿಸುತ್ತಲನುಪಮ । ಶಿವನ ಚರಿತೆ
ಯನೊಲಿದು ಪೇಳುತ । ಶಿವನ ಭಕ್ತರಿಗೆಲ್ಲ ಮೋಕ್ಷಾಂಗ
ನೆಯುಸಖ್ಯವನೂ ॥ ತವಕದಿಂದೆಸಗುತ್ತ ಶಿಷ್ಯರ । ನಿವಹ
ಮಂ ಪಾಲಿಸುತಲಘುಹರ । ಶಿವಯತೀಶ್ವರರಿಲ್ಲಿ ಕುಷ್ಟಿಗಿ
ಪುರದಿ ರಂಜಿಪರೂ ॥೨॥

ಗಣಿಸಲಸದಳಮೆನಿಪ ಶಿಷ್ಯರು । ಮಣಿದು ಕಾಣ್ಕೆಯನಿತ್ತುಪೂಜಿಸು । ತಣಿಯರಂ ಯತಿರಾಜವಡೆಯರಚರಣವೋಲೈಸೀ ॥ ಕಣುಮನಂದಣಿವಂತೆ ಭಜಿಸುತ । ಫಣಿಪಕುಂಡಲನೀತನೆಂದೇ । ಗುಣಗಣಂಗಳಿಗೆಣೆಯುಗಾಣದೆಕೀರ್ತಿಸುತ್ತಿಹರೂ ॥೩॥

ಭೂಮಿಪಾಲರು ನಾಡಗೌಡರು । ಗ್ರಾಮಣಿಗಳುಂ ಶಿವಸುಭಕ್ತ । ಸ್ತೋಮವೆಲ್ಲರು ಶಿಷ್ಯರಾದರು ತಂಡ ತಂಡದಲೀ ॥ ಗ್ರಾಮಗ್ರಾಮದಿ ಮಠವಕಟ್ಟಿಸಿ । ಭೂಮಿಯುಂಸಹ ತೃಪ್ತಿಗೋಸುಗ । ಸೋಮಶೇಖರಸ್ವಾಮಿಗೊಪ್ಪಿಸಿ ಕೃಪೆಯ ಪಡೆಯುವರೂ ॥೪॥

ಟೆಂಗುಟೀಮೂದಾಪುರಂ ನೆರೆ । ಲಿಂಗಬಂಡಿಯುತವಳಗೇರಿಯು । ಕಂಗೊಳಿಪವಣಿಗಿರಿಯು ಮುಂತಾದಖಿಳ ಪಳ್ಳಿಯೊಳೂ ॥ ತುಂಗಮಠಗಳಕೊಡಲು ವಟುಗಳ । ವಂಗಡವನಲ್ಲಲ್ಲಿ ನೇಮಿಸಿ । ಮಂಗಳಾತ್ಮಕರಾವುದಂ ಮೋಹಿಸದೆ ರಾಜಿಪರೂ ॥೫॥

ಭೋಗಭಾಗ್ಯವು ಸಕಲಸಂಪದ । ಪೂಗಮೆನಿತೆನಿತಿರ್ದೊಡೇನು ವಿ । ರಾಗಿಕರಿಬಸವಾರ್ಯನಾವುದವೋಹಿಸದೆ ಘುದದೀ ॥ ಆಗಳಾಗುರುಚನ್ನಬಸವಗೆ । ಯೋಗಿಪಟ್ಟವಕಟ್ಟಿಮುಂದಕೆ । ಸಾಗಿದರು ಶಿವಭಕ್ತಿಸಂಘವಸಲುಹಬೇಕೆಂದೂ ॥೬॥

ಕಂಡಕಂಡವರೆಲ್ಲ ವಿನಯದಿ । ಮುಂಡೆಯನು ಬಾಗಿಸುತ ನಮಿಪರು । ಅಂಡಲೆಯ ಕೆಳೆದೆಮ್ಮವಂ ಸಲ

ಹೆಂದು ಬೇಡುವರೂ ॥ ಖಂಡಪರಶುವಿನಾಜ್ಞೆಯಿಂಭೂ
ಮಂಡಲಕೆ ನಡೆತಂದಗುಣಮಣಿ । ಮಂಡಣನನುಕ
ಯ್ಯದವರೀಲೋಕದೊಳಗುಂಟೇ ॥೭॥

ಬಾಲನಂತುನ್ಮತ್ತನಂತೆ ವಿ । ಶಾಲಭೂತಗಳಂ
ನಟಿಸುತ । ಲೀಲೆಯಿಂದೈತಂದುಪೊಕ್ಕನು ಬೀಜಪುರ
ನ್ನೂ ॥ ಆಲಯಂಗಳಮುಂದೆ ನಿಲುವನು । ಆಲಿಬಡಿಯ
ದೆ ನೋಡುತಿಪ್ಪನು । ಕಾಳುಗತ್ತಯಲ್ಲಿಯುಂ ತಿರುಗುತ್ತ
ಲಿರುತಿಹನೂ ॥೮॥

ಆ ವಿಜಾಪುರದೆಲ್ಲಜನರುಂ । ಭಾವಿಸಿದರಿವನುರು
ಳನೆಂದೇ । ಯಾವತಾವಿಲಿನೋಡಿದರು ನಗುನಗುತನರ್ತಿ
ಪನೂ ॥ ಗಾವಿಲರು ಪರಿಪರಿಯುಹಾಸ್ಯದಿ । ಬೈವರಲ್ಲದೆ
ಪೊಡೆಯುತಿಪ್ಪರು । ನಾನಾವಿಧದಿಂ ಪೀಡಿಸಲು ಮುಳಿ
ಸಿಲ್ಲಮುವರಲ್ಲಿ ॥೯॥

ಕಲ್ಲುಕಟ್ಟಿಗೆಯಾಯ್ದು ಪೊಡೆಯುವ । ರಲ್ಲಿರುವ
ಬಾಲಕರು ಯತಿಗಳ । ವಲ್ಲಭನಿಗವು ಸೋಂಕದಲೆ ಬಳ
ಯಯ್ದು ಬೀಳುವವು ॥ ವಳ್ಳೆಹಗ್ಗದಿ ಬಿಗಿಯಲೆಳಸಲಿ।
ಕಲ್ಲಿಯೆ ಬಯಲಪ್ಪರಿಳೆಯೊಳ । ಗೆಲ್ಲಿಯುಂ ಇಂತಪ್ಪನು
ಹಿಮರ ಕಾಣೆವೆನುತಿಹರೂ ॥೧೦॥

ನಿಂತತಳದಲಿ ನಿಂತಕೆಲದಿನ । ಕುಂತಡಂ ಕುಳಿ
ಪ್ಪರನಿಶಂ । ಸಂತಸದಿ ಮಲಗಿರ್ದೊಡಂ ಮಲಗಿಪ್ಪನೊಂ
ದಡೆಯೋಳ್ ॥ ಚಿಂತೆಯಿಲ್ಲದೆ ಬಾಲರೊಡನೆ ಸ । ಮಂ
ತುಲೀಲೆಯನಟಿಸಿ ವಿಷಯದ । ಭ್ರಾಂತಿಗೆಳಸದೆ ಪಸಿವು
ತೃಷೆಗಳಹಂಗಿನೊಳಗಿರದೇ ॥೧೧॥

ಪರಿಪರಿಯಲೀಲೆಗಳನೆಸಗುತ। ಲಿರುವವಮಹಿಮ
ರ ವಾರ್ತೆಗೇಳ್ದಾ । ಧರುಣಿಪತಿ ಈಸೂಫ್ ಆದಿಲ್‌ಷಹ
ನು ಪ್ರೇಮದೊಳೂ ॥ ಗುರುಗಳಂ ಕರತರ್ಪುವದೆನುತಂ।
ಪರಿಚರರ ಕಳುಹಿಸಿದನಾಗಳೆ । ಪುರದೊಳನಿತುಂನೆಲೆ
ಗಳಂ ಬೆದಕಿದರುಶೋಧಕರು ॥೧೨॥

ಎಲ್ಲಿಯುಂಯತಿಪತಿಯಕಾಣದೆ । ತಲ್ಲಣಿಸುತಲ್ಲಲ್ಲಿ
ಬೆಸಗೊಳ । ಲೆಲ್ಲರುಂ ಮವನಾವ ಸಜ್ಜನನೇಕೆ ಪುಡುಕು
ವಿರೀ ॥ ವಳ್ಳೈಗುಣಮುನಿ ತಿಲ್ಲಮವನೀ । ವಲ್ಲಭನಿಗರು
ಪೆಂದು ನುಡಿವರು । ಬಲ್ಲವರುಶಿವಯೋಗಿಪುಂಗವನೆಂ
ದು ಪೊಗಳುವರೂ ॥೧೩॥

ದೂರದೊಳುಗುರುವರನು ನಸುನಗೆ । ಬೀರುತ್ತೈ
ತರೆ ಕಂಡುನೆರೆಪರಿ । ಚಾರಕರುಪರಿವೇಷ್ಟಿಸುತೆ ಪೊಡ
ಮಟ್ಟು ನುತಿಸುತ್ತೇ ॥ ಧಾರುಣೀಶ್ವರನಿಂದು ನಿಮ್ಮಯ ।
ಚಾರುಕರುಣವ ಬಯಸುತಿಪ್ಪನ । ಪಾರದಯದಿಂ ಬಂ
ದು ಪಾಲಿಸಬೇಕು ನರಪತಿಯಾ ॥೧೪॥

ಎಂದು ಬಿನ್ನಯಿಸಲ್ಕೆ ಕರುಣಾ । ಸಿಂಧುತಾನಿಂ
ತೆಂದನರಸನ । ಮುಂದೆ ಬರಲೇಂ ಕಜ್ಜಮಿದೆನಾಂ ತಿರು
ಕ ಜಂಗಮನೂ ॥ ಯೆಂದೆನಲುಪರಿಚರರು ಬಹುವಿಧ।
ದಿಂದತಿಳುಪಲು ಬಾರದಿರ್ದಡೆ । ಬಂಧಿಸುತೆ ಪಿಡಿದೊ
ಯ್ಯಲೆಳಸಿದೊಡಲ್ಲೆ ಬಯಲಾದ ॥೧೫॥

ಓಡುತಿಹನಲ್ಲಲ್ಲಿ ನಿಲುವನು । ನೋಡಿಕರೆಯಲು
ನಗುತ ಹಾಸ್ಯವ । ಮಾಡುತಿರೆ ಗಜವಾಜಿವಾಹಕರಾಗ

ಕೋಪದೊಳೂ ॥ ಮೂಢತನದಿಂ ಬೆನ್ನನಟ್ಟಲು । ನಾಡ
ಮುಂಬಿನೊಳಿರ್ಪನೆಲ್ಲರು । ಬಾಡಿಬೇಸರಗೊಂಡು ತಿಲ್ಪ
ಗುತ್ತರಸನೆಡೆಗೈದೆ ॥೧೬॥

ಎಲ್ಲವಾರ್ತೆಯನರುಪಲವನೀ । ವಲ್ಲಭನು ಬೆರಗಾ
ಗಿಕೀರ್ತಿಸಿ । ಬಲ್ಲಿದರು ಶಿವಯೋಗಿ ಪುಂಗವರವರದರ್ಶ
ನದಾ ॥ ಒಳ್ಳೆದಿನವೆಂದಿಂಗೆ ಬಹುದಘ । ದಲ್ಲಣರಕ್ಕ
ಪೆವಡೆದು ಜೀವಿಸ । ಬಲ್ಲಡವನೇ ಧರುಣಿಪಾಲಕನೆಂದು
ಯೋಜಿಸುತ ॥೧೭॥

ಒಂದುದಿನಪರಿವಾರವೆರಸಿವ । ಸುಂಧರೀಶನು ಗ
ಜವನಡರಿಯ । ಮುಂದವೈಭವದಿಂದೆ ಬರುತಿರೆ ಮಧ್ಯ
ಮಾರ್ಗದೊಳೂ ॥ ಇಂದುಶೇಖರಯತಿಯು ಪಾಳ್ಮನೆ।
ಮುಂದಿರುವಭಿತ್ತಿಯನು ನೆಮ್ಮುತ । ಮಂದಹಾಸದಿ ಕು
ಳಿತು ನೋಡುತ್ತಿಪ್ಪನುತ್ಸವವಾ ॥೧೮॥

ಯತಿಪತಿಯನೋಡದಲೆ ಸರ್ವರು । ಹಿತದಿಮುಂ
ದಕೆಪೋದರಿತ್ತಲು । ಅತಿವಿನೋದದಿ ಗುರುವರನುಕುಳಿ
ತಿಪ್ಪಭಿತ್ತಿಯನೇ ॥ ವಿತತಗಜದಂದದೊಲು ನಡಸುತ।
ಜೊತೆಯೊಳೈತರೆ ಕಂಡು ನಿಖಿಳರು । ಕ್ಷಿತಿಪತಿಗೆ ತಿಳುಪ
ಲ್ಕೆಯಭಿಮುಖನಾಗಿ ನೋಡಿದನೂ ॥೧೯॥

ನೋಡುತಿರಲೆದುರಿನೊಳು ಪಳೆದಹ । ಗೋಡೆಯ
ನು ಗಜದಂತೆ ನಡೆಸುತೆ । ಮೂಡುವೆಳೆನಗೆಬೀರುತೈತಹ
ಮಹಿಮರಂ ಕಂಡೂ ॥ ನಾಡೊಡೆಯನತ್ಯಂತವಿಸ್ಮಯ।

ಗೂಡಿ ಕರಿಯಿಂದಿಳಿದು ಕರಗಳ । ಜೋಡಿಸುತಭಯಭಕ್ತಿಯಿಂ ಭಜಿಸುತ್ತ ನಮಿಸಿದನೂ ॥೨೦॥

ದೇವ ನಿಮ್ಮಡಿಗಳನುಕಾಂಬುವ । ಭಾವದಿಂಬಹುಯತ್ನಗೈದೊಡೆ । ನೀವು ಕರುಣಿಸಲಿಲ್ಲವುದರಿಂ ವ್ಯಸನವೂಗಿತ್ತು ॥ ತಾವಕಾಂಘ್ರಿಯಕಂಡು ಸಂತಸ । ತೀವಿದೀಗ ಕೃಪಾಕಟಾಕ್ಷದಿ । ಕಾವುದೆನ್ನನು ದೋಷದುರ್ಗುಣಗಳನು ಗಣಿಸದಲೇ ॥೨೧॥

ಅರಸನೀಪರಿನುತಿಸಿಯಡಿಗಳಿ । ಗೆರಗಿ ಕಾರುಣ್ಯವನು ಬಯಸಲು । ಕರಿಬಸವಯತಿರಾಜನಾಶೀರ್ವದಿಸಿ ಸಂತಸದೀ ॥ ಸಿರಿಗಿರಿಯ ತೆರನೆಲ್ಲನರುಪಲು । ಹರುಷದೊಡನಾಭೂಮಿಪಾಲನು । ಗುರುವರನಿಗಲ್ಲಲ್ಲಿ ಮಠಗಳಕಟ್ಟಿಸಿದನಾಗ ॥೨೨॥

ಪ್ರೇಮದಿಂಮಣಗೂಳಿ ನಗರದಿ । ಯಾಮಹಾಮಠವೊಂದು ರಚಿಸುತ । ಸ್ವಾಮಿಗೊಪ್ಪಿಸಿ ವಿಜಯಪುರದಾರೋಜಪ್ಯಾಟಿಯೊಳು ॥ ರಾಮಣೀಯಕಮಪ್ಪ ಹಿರಿಮಠ । ವಾಮಹಿತಪನ್ನೊಂದುಚಾವರ । ಭೂಮಿಯಂ ಲಿಂಗಾಂಗಭೋಗದಸಾಧನಕೆ ಕೊಟ್ಟ ॥೨೩॥

ಆನೆಯಂದದಿ ಗೋಡೆನಡೆಸಿದ । ಜ್ಞಾನನಿಧಿಮಹಿಮಾಂಬುರಾಶಿಗೆ । ಈ ನವಮುದ್ದಾನೆ ಕರಿಬಸವಾರ್ಯನೆನ್ನುತಿಹ ॥ ಸಾನುರಾಗದ ನಾಮದಿಂ ಬಹು । ಮಾನಪತ್ರವ ಬರೆಸಿಕೊಟ್ಟನು । ನೂನಭಕ್ತಿಯೊಳರಸನಾಗುರುಸೇವೆಗಯ್ಯುತಿರೇ ॥೨೪॥

ಮಂಗಳಾತ್ಮಕರಾಮಠದಿ ಶಿವ । ಲಿಂಗಪೂಜೆಯ
ನೆಸಗುತಂ ಗಣ । ವಂಗಡಕೆ ಸ್ಥಳಕುಳವಿಚಾರವನರುಹು
ತಂ ಮುದದೀ ॥ ಅಂಗಭೋಗಮನೆಲ್ಲ ನಿರುಪಮ । ಲಿಂ
ಗಭೋಗಮನೊಡರ್ಚಿ ವಿಷಯದ । ಹಂಗಿನೊಳಗಾಗ
ದಲೆ ಯೋಗಿವರೇಣ್ಯನೊಪ್ಪಿದನೂ ॥೨೫॥

ಕೆಲವುದಿನವಲ್ಲಿದ್ದು ಶಿಷ್ಯರ । ಬಳಗದೊಳು ಜಸ
ವೆತ್ತು ಮೆರೆಯುವ । ಮಲಹರಂ ಶ್ರೀಬಸವಲಿಂಗಯತೀ
ಶಗಾಮಠವಾ ॥ ನಲುವಿನಿಂದೊಪ್ಪಿಸುತ ನಡೆದರು । ಇಳೆ
ಯೊಳನುಪಮ ಮಹಿಮೆಯೆಸಗುತ । ತೊಳಪಶಿವಮತ
ದೇಳ್ಗೆಯಂ ಪಸರಿಸುತ ಸಂತಸದೀ ॥೨೬॥

ಪಡುಣದೆಶೆಯೊಳಗಿಪ್ಪ ಪಲವುಂ । ಪುರವು ಗ್ರಾ
ಮಂ ಪಳ್ಳಿವಾಸದ । ಹರಶರಣಸಂದೋಹಮಂ ಸ್ಥಲಹು
ತ್ತಲೈತರಲೂ ॥ ಮೆರೆವುದತ್ತ ಮುಧೋಳನಗರವು । ಪಶ್ಚಿ
ಮುಖದೊಳೊಪ್ಪಿತ್ತು ಘಟಪ್ರಭೆ । ವರನದಿಯು ಸಂಪೂ
ರ್ಣಜಲಮಯವಾಗಿ ಪರಿವುತ್ತೆ ॥೨೭॥

ತುಂಬಿಪರಿಯುವನದಿಯದಾಂಟಿಸ । ಲಂಬಿಗರು
ನಾವೆಯನು ನಿಲಿಸುತ । ನಂಬಿಬಹಪಾಂಥರ್ಕಳಂ ಕುಳ್ಳಿ
ರಿಸಿ ನಡೆಸುತಿರೇ ॥ ಶಂಭುಸಮಶಿವಯೋಗಿ ನಾವಿಕ ।
ಬಂಬಲಕೆ ದಾಂಟಿಸಲುಕೇಳೆ ವಿ । ಡಂಬಿಸುತ ಕಬ್ಬಿಲರು
ಯತಿಯಂ ನಿಲ್ಲಿಸಿದರಾಗ ॥೨೮॥

ಗಾವಿಲರು ಶಿವಯೋಗಿಪುಂಗವ । ರಾವಿಮಲ ಮ
ಹಿಮೆಗಳ ಬಲ್ಲರೆ । ಭಾವಿಸಲು ಪೂರ್ವಾಚಿ ದಿವಪನಕಿರಣ

ಮರಿದಪವೇ ॥ ದೇವನಂ ಭವಶರಧಿತಾರಕ । ನಾವನಂ ತೀರದೊಳು ನಿಲ್ಲಿಸಿ । ತೀವಿದುತ್ಸವದಿಂದಲೆಲ್ಲರು ನದಿಯ ದಾಂಟುತಿರೇ ॥೨೯॥

ಶಂಭುಸಮಶಿವಯೋಗಿತನ್ನಯ । ಕಂಬಳಿಯಪಾಸುತ್ತ ಕುಳಿತಾ । ಅಂಬುವಿನಮೆಲತಿವಿನೋದದಿ ಬರುವದಂ ಕಂಡು ॥ ಅಂಬಿಗರುಮಾನಿಖಿಳಪಾಂಥರು । ನಂಬಿನೆನೆಯುತ್ತಿರಲು ಪೊಳೆಯನಿ । ತಂಬದೊಳುಮಾಪೊಳಲಜನರುಂ ನೀರ್ಗೆಬಂದಿಹರೂ ॥೩೦॥

ಪುರದರಸುಲಕ್ಷ್ಮೀಶ ತನ್ನಯ । ಪರಿಚರರನೊಡಗೂಡಿಬಂದಾ । ತೊರೆಯತೀರದಿನಿಂದು ಬಿನದಿಸುತಿಪ್ಪಸಮಯದೊಳೆ ॥ ಗುರುವರನು ನಸುನಗುತಗೌರೀ । ವರನನುತಿಸುತ ಬರುವರೀತಿಯ । ನರಿದುಸರ್ವರು ಪರತರಾದ್ಭುತವೆಂದು ನೋಡುತಿರೇ ॥೩೧॥

ಗುಳುಗಳುಧ್ವನಿಯಿಂದೆ ಪರಿಯುವ । ಪೊಳೆಯೊಳಲೆಗಳ ಪೊಡತದಿಂದಲಿ । ಕೆಳಕೆಳಗೆ ಪರಿದೋಡುತಿರ್ದವು ನಾವೆಗಳು ಮತ್ತೆ ॥ ಕೆಲದತರುಗಳು ಕಿಳ್ತುನಡೆದವು । ಮಲಹರನ ಕಂಬಳಿಯಗರ್ದುಗೆ । ಬಲುಮಹೋತ್ಸವದೋಳುಪ್ರವಾಹಕ್ಕೆದುರು ಬರುತಿಹುದೂ ॥೩೨॥

ಗುರುವರೇಣ್ಯನುಕಂಬಲಾಸನ । ವೆರಸಿ ತೀರಕೆಬಂದೊಡಲ್ಲಿಯ । ನರಪನುಂ ಸಹಸರ್ವಜನರತಿಭಕ್ತಿಯಿಂನಿಂದೂ ॥ ಕರಮುಗಿದು ನುತಿಸುತಿರಲಾಗಳೆ । ಕರಿಬಸವಯತಿರಾಜನನುಪಮ । ಹರುಷದಿಂ ಕಂಬಳಿಯಕೈಕೊಂಡಾಗಳೆದ್ದುಬರೇ ॥೩೩॥

ನೀರುಪೊರ್ದದಕಂಡಳಿಸುನಾ । ಗೌರವದಗುರು ನಾಥಪೊದೆಯುತ । ವಾರಿಯಂ ತೊರೆದಿತ್ತಬರಲಾನೃಪತಿ ಮೊದಲಾದ ॥ ಪೌರಜನವುದ್ಭುತದ ಭಕ್ತಿಯು । ಪೂರ ದಿಂ ಪೊಡಮಟ್ಟು ಯತಿಯುಕ್ರ । ಪಾರಸವನೊಲಿದೀಂಟಿ ಮಹಿಮರ ಪೊಗಳತೊಡಗಿದರೂ ॥೩೪॥

ಮುಸುಡಿಚೌಡನು ಬಳಗಸಹಿತಂ । ಸಸಿನೆಯಿಂ ಪೊಳೆದಾಂಟಿ ಪೋಗಿ । ರ್ವಸಮುಮಹಿಮೆಯುನೆನೆದುಗು ರುವರನಾಗತೋರಿಸಿದಾ ॥ ಪೊಸಪರಿಯ ಲೀಲೆಯುನುಬ ಣ್ಣಿಸು । ತೊಸೆದು ಸರ್ವರು ಭಕ್ತಿಯಿಂ ಪರ । ವಶತೆಯೊ ಳಕೊಂಡಾಗ ದೈನ್ಯದಿನುತಿಸಿ ನಮಿಸಿದರೂ ॥೩೫॥

ಅನಿತರೊಳು ಕಬ್ಬಿಲರು ತೀರದೊ । ಳನುವಿನಿಂ ನಾವೆಯುನು ನಿಲಿಸುತ । ಜನಸಮೂಹಂವೆರಸಿಬಂದಾಗು ರುಗಳಂ ಕಂಡೂ ॥ ವಿನಯದಿಂ ಸಾಷ್ಟಾಂಗವೆರಗುತೆ । ಘನಕೃಪಾಕರನೆಮ್ಮತಪ್ಪುಗ । ಳೆಣಿಸದಲೆ ಕಾರುಣ್ಯದಿಂ ಕಾಪಾಡಬೇಕೆಂದೂ ॥೩೬॥

ಪರಿಪರಿಯೊಳಡಿಗೆರಗಿ ಪ್ರಾರ್ಥಿಸು । ತಿರುವರಿಗೆ ಕೃಪೆಮಾಡಿ ನುಡಿದರು । ಹರನಿರೂಪದೊಳಾದುದದುನೀ ವ್ಗಯ್ದುದೊಂದಿಲ್ಲ ॥ ಹರುಷವಿದೆ ಚಿಂತಿಸಲುಬೇಡೆಂ । ದೊರೆವಗುರುವಿನ ಶಾಂತಮುದ್ರೆಯು । ನರಿದು ಸಜ್ಜನ ರೊಪ್ಪಿ ಪಲವಂದದಲಿ ನುತಿಸಿದರು ॥೩೭॥

ಈ ಮಹಾಗುರುನಾಥಗೆಮ್ಮಯು । ಗ್ರಾಮದೊಳು ಮಠವೊಂದುಗಳನುಂ । ಪ್ರೇಮದಿಂ ಕೊಟ್ಟವರನಿಲ್ಲಯೆ ನಿ

ಲಿಸಬೇಕೆನಲೂ ॥ ಭೂಮಿಪತಿಯುದಕೊಪ್ಪಿ ಹಿರೆಪುತ। ವಾಮಹಿತ ಧರೆಯಾದಿಭೋಗವ। ಸ್ವಾಮಿಗೊಪ್ಪಿಸಿ ಚರಣಕವನತ್ತನಾಗಿ ಬೆಸಗೊಳಲೂ ॥೩೮॥

ಅದಕೊಡಂಬಡುತಾಮುಧೋಳದಿ । ಪದುಳದಿಂ ಗುರುನಾಥನೊಪ್ಪಿರೆ । ಸದಮಲಾಂಗರ ಕೃಪೆಯುಪಡೆದಾ ಶಿಷ್ಯಸಂದೋಹ ॥ ವಿಧವಿಧದಿ ಸೇನೆಯುನು ಗಯ್ಯುತ । ಮದನಹರನವತಾರರೆಂದೇ । ಮುದದಿನಂಬುತ ನಿಚ್ಚಲುನ್ಮೋಲ್ಲೈಸಿ ಕೊಂಡಿಹರೂ ॥೩೯॥

ಅಲ್ಲಿ ಕೆಲದಿನವಿದ್ದು ಗುರುಕುಲ । ವಲ್ಲಭನು ನಿಜಶಿಷ್ಯನೋರ್ವನ । ನಿಲ್ಲಿಸುತಲಾಮಠಕೆಯುದನುಂ ತೊರೆದು ಸಂತಸದೀ ॥ ಸಲ್ಲಲಿತ ಕುಷ್ಟಿಗೆಯಗ್ರಾಮದೊಳೆಲ್ಲಭಕ್ತರು ನೆನೆವಬಯಕೆಯ । ಬಲ್ಲ ಪರಮಜ್ಞಾನಿಗಳು ಬರೆ ಕಂಡುನಮಿಸಿದರೂ ॥೪೦॥

ದೇವ ಕರುಣಾಸಿಂಧು ನಿಮ್ಮಡಿ । ದಾವರೆಯ ಕಂಡೆಮ್ಮಸುಖಮಯ । ಜೀವಿತವು ಸಾರ್ಥಕಮದಾಯಿತ್ತೆಂಬ ಭಕ್ತರಿಗೇ ॥ ಸಾವಧಾನದಿ ಕೃಪೆಯಬೀರುತ । ಪಾವನಾಂಗನು ಕರಿಬಸವಗುರು । ಶೀವಿದಾನಂದದೊಳೆ ಕುಷ್ಟಿಗಿಮಠದಿ ಶೋಭಿಸನೂ ॥೪೧॥

ಮ. ವಿಕ್ರೀಡಿತ. ಶರದೇಂದೂಜ್ವಲಮಂದಹಾಸ್ಯೆ ಕರುಣಾಪೂರ್ಣಾಂಬುರಾಶೀಶಿವೇ । ಗಿರಿರಾಜೋತ್ತಮವಂಶಪಾವನಕರ್ತೀ ಶ್ರೀಕಂಠಹೃನ್ಮೋಹಿನೀ ॥ ಸಿರಿಮುಖ್ಯಾಮರಮಾನಿ

ಪರಿಮಿಳತ್ಸಂಸೇವ್ಯಪಾದಾಂಬುಜೇ । ಪರಶಕ್ತಿಭ್ರಮರಾಂ
ಬ ಪಾಲಿಸೊಲವಿಂದೆನ್ನಂ ಸದಾ ಶಾಂಕರೀ ॥೪೨॥

ಭಾ. ಷ. ಇದುವೆ ಶ್ರೀಗುರುಚನ್ನಬಸವನ । ಸದಮಲ
ಚಾರಿತ್ರ್ಯವತಿಶಯ । ಮುದದಿಪೇಳ್ದಂ ರಾಚವೀಟಿಯ
ಶಾಂತವೀರಾಖ್ಯಂ ॥ ಪದುಳದಿಂಕೇಳ್ವವರ ಬಯಕೆಯ।
ನೊದವಿಸುವನಾಮಲ್ಲಿಕಾರ್ಜುನ । ಸದಯನೂನಸದಿ
ದಲಿಲ್ಲಿಗೆಯಯ್ದನೆಯ ಸಂಧೀ ॥೪೩॥

ಇಂತು ಪಂಚಮಾಧ್ಯಾಯಕ್ಕೆ ಮಂಗಲಂ.

## ಅಥ ಷಷ್ಠಾಧ್ಯಾಯ ಪ್ರಾರಂಭಃ



ಸೂಚನೆ:- ಕರಿಬಸವಯತಿರಾಜ ಬಯಲೊ
ಳು । ಬೆರೆಯಲಾಕುಷ್ಟಿಗೆಯಗು
ರುವಿನ । ಪರಮಪಟ್ಟದವಲ್ಲರಿ
ಯ ಬಿತ್ತರಿಪೆನಿದರಲ್ಲಿ ॥

ನಂದಿವಾಹನ ನಾಗಕಂಕಣ । ಸಿಂದುಶೇಖರನಾದ್ಯ
ನನುಪಮ । ಕಂದರ್ಪ ಕಲಿಕಾಲ ತ್ರಿಪುರರನುರುಹಿ ಭಸಿ
ತವನು ॥ ಛಂದದಿಂ ಧರಿಸಿರ್ಪಶಂಕರ । ತಂದೆ ಶ್ರೀಗಿರಿ
ಮಲ್ಲಿಕಾರ್ಜುನ । ನೆಂದುವುಂ ಬಿಡದೆನ್ನನೇ ಸಲಹೆಂದು
ಭಜಿಸುವೆನೂ ॥೧॥

ಕೆಲವುದಿನ ಕುಷ್ಟಿಗೆಯ ಮಠದೊಳು । ಮಲರಹಿ
ತಕರಿಬಸವದೇವನು । ಬಲುವಿನೋದದೊಳಿರಲು ಯೆಲ್ಲಾ

ಕಡೆಯ ಜನರಾಗಾ ॥ ಬಳಗಸಹಿತಂಬಂದು ನಿಜಮನ । ವೆಳಸಿದುದನೇ ಪಡೆದು ಚಿಂತೆಯ । ನುಳಿದು ಪರಿಪರಿಯಿಂದ ಪೊಗಳುತ್ತಿರ್ಪರನವರತಾ ॥೨॥

ಭೂತಗ್ರಸ್ತರು ಬಂದುನಮಿಸುತ । ಭೀತಿಯಿಂಕುಣಿಯುತ್ತ ಸಿರಿತಿನಿ । ವ್ರಾತವೆತ್ತಲು ವೋಡುತಿರ್ದವು । ಬಿಟ್ಟೆವೆಂದೆನುತೇ ॥ ಆತಳೋದರಿಯರ್ಗೆಮನಸಿನ । ಪ್ರೀತಿಯಂತಹ ಮಕ್ಕಳಂ ಗಣ । ನಾಥಕರುಣಿಸಲಿಳೆಯಮಕ್ಕಳನೆತ್ತಿ ಬರುತಿಹರೂ ॥೩॥

ಬಡತನದ ಭೀತಿಯನು ಸೈರಿಸ । ದಡಿಗೆರಗಿ ನುತಿಪರ್ಗೆ ಪರಿಪರಿ । ಪಡಗರವನೊಲಿದಿತ್ತು ಸಜ್ಜನರಿಂಗೆಯಭಿಮತವಾ ॥ ನಡೆಸುತಂ ಕರಿಬಸವದೇವನು । ಮಿಡನಿರುವ ಶ್ರೀಗಿರಿಯ ಕಾಣದ । ಧೃಢನಿವಾಸದೊಳಿರ್ಪ ಬಯಕೆಯನಾಂತು ಸಂತಸದೀ ॥೪॥

ಗುರುಚನ್ನಬಸವಂಗೆ ಮುಂದಿನ । ಪರಿಯನೆಲ್ಲವ ತಿಳುಪಿ ನೆರದಿಹ । ಪುರಜನಕೆ ಶಿವಭಕ್ತಿಯಂ ನೆಲೆಗೊಳಿಸಿ ಕುಷ್ಟಿಗೆಯಾ । ತೊರೆದು ಸಂತಸದಿಂದಬಂದಾ । ಸಿರಿಗಿರಿಯ ಭ್ರಮರಾಂಬೆಮಾತೆಯ । ಪರಮಪಿತನಹ ಮಲ್ಲಿಕಾರ್ಜುನರಡಿಗಳಂ ಕಂಡು ॥೫॥

ನಮಿಸಲಾಶ್ರೀಗೌರಿಶಂಕರ । ರಮಿತಮುದದಿಂ ಮಗುವೆ ಬಾರೆನು । ತಮರ್ದು ಮುದ್ದಾಡುತ್ತಲೆಮ್ಮಯ ಭಾಷೆ ಪಾಲಿಸುತ್ತೇ ॥ ಸುಮನದಿಂದೈತಂದೆ ನಿನ್ನಯ । ಕ್ರ

ಷುಗಳಿಗೆ ಸಂತೋಷವಾಗಿದೆ । ವಿಮಲಗಣವರರಿಪ್ಪ ಕ
ಳಿಗೆ ಪೋಗು ನೀನೆಂದೂ ॥೬॥

ಪರಸಿಕಳುಹಲು ಕರಿಬಸವಗುರು । ಭರದಿಬಂದಾ
ಕದಳಿಬನದೊಳು । ತೆರಳುತಂ ಜಯುನಮಃಪಾರ್ವತೀಪ
ತೆಯೆನುತೆ ॥ ಪರಮಪ್ರಮಥರಪೊಂದಿ ಸುಖಮಿರೆ । ಸು
ರರು ಪೂಮಳೆಗರೆದರಾಗಳೆ । ಪರಿಪರಿಯವಾದ್ಯಂಗಳು
ಲಿದ್ದವು ಜಯಪರಾಕೆನುತೆ ॥೭॥

ಇತ್ತ ಕುಷ್ಟಿಗಿಮಠದೊಳಿರ್ಪನು । ದಾತ್ತಗುಣನಿ
ಧಿ ಚನ್ನಬಸವನು । ಉತ್ತಮಾನ್ವಯಜಾತನಹ ಚನವೀರ
ದೇವಂಗೆ ॥ ಉತ್ತರಾಧ್ಯಕ್ಷತೆಯನಿತ್ತರು । ಮತ್ತವರ ಕರ
ಕಮಲದೊಳು ಜನಿ । ಸುತ್ತ ಮೆರೆದರು ಪರಮಕರಿಬಸ
ವಾರ್ಯರನುಪಮರೂ ॥೮॥

ಅವರಿಂದ ಕರಿಬಸವಸ್ವಾಮಿಗ । ಳವರಿಂದ ಮ
ದ್ದಾನೆಸ್ವಾಮಿಗ । ಳವರಪದದಿಂ ಚನ್ನಬಸವಸ್ವಾಮಿಗಳು
ಮತ್ತೆ ॥ ಅವರಿಂದ ಮುದ್ದಾನೆಸ್ವಾಮಿಗ । ಳವರ ಚರಣದಿ
ಕರಿಬಸವಗಣ । ನಿವಹದಧಿಪತಿಯಾತನಿಂ ಶ್ರೀಚನ್ನವೀ
ರಾರ್ಯ ॥೯॥

ಅವರ ಕರಕಮಲದೊಳು ಜನಿಸಿದ । ಶಿವಯೋಗಿ
ಮುದ್ದಾನೆಸ್ವಾಮಿಗ । ಳವರಮಠದಿಂ ಚನ್ನಬಸವಸ್ವಾಮಿ
ಗಳು ಮತ್ತೆ ॥ ಅವರಿಂದ ಕರಿಬಸವಸ್ವಾಮಿಗ । ಳವರ
ಸುತ ಮರಿಕರಿಯಬಸವಂ । ಭವರಹಿತರವರಿಂದ ಶ್ರೀಗು
ರು ಚನ್ನಬಸವೇಶ ॥೧೦॥

ಗುರುವಿನಿಂ ಕರಿಬಸವನಾತನ । ಚರಣದಿಂ ಮ
ದ್ದಾನೆಸ್ವಾಮಿಗಳ । ವರಪದದಿಂ ಚನ್ನವೀರಸ್ವಾಮಿಗಳು
ಮವರಾ ॥ ಕರಕಮಲಸಂಜಾತರೆನಿಸಿದ । ಪರಮಶ್ರೀ
ಗುರು ಚನ್ನಬಸವನ । ಚರಿತೆಯಂ ಪೊಸತೆನಲು ಬಿತ್ತರಿ
ಸುವೆನು ಮುದದಿಂದೆ ॥೧೧॥

ಆ ಮಹಾಗುರುನಾಥಜನಿಸಿದ । ಗ್ರಾಮವದುಅ
ಮರೇಶಕ್ಷೇತ್ರದ । ಸೀಮೆಯೊಳಗುರೆಮೆರವ ಹುನುಗುಂ
ಟಂಬ ಪಳ್ಳಿಯೊಳು ॥ ಶ್ರೀಮಹಿತಮಾಹೇಶವಂಶದಿ ।
ಸ್ವಾಮಿಯುದಯಿಸಿ ಚನ್ನಬಸವನ । ನಾಮದಿಂ ಕುಷ್ಟಿಗೆ
ಯಹಿರೆಮಠ ದೊಡೆಯರಾಗಿಹನೂ ॥೧೨॥

ಚನ್ನಬಸವನ ಮಹಿಮೆಯನು ಪೊಡೆ । ಪನ್ನಗೇಂ
ದ್ರಂಗಸದಳಂ ಸಂ । ಪನ್ನಗುಣನಿಧಿ ಬಾಲ್ಯದೊಳೆ ವೈರಾ
ಗ್ಯಮಾಂತಿಹನೂ ॥ ಭಿನ್ನವಿಲ್ಲದೆ ನಿತ್ಯಕಾಲದೊ । ಳನ್ನಪಾ
ನಾದಿಗಳ ಬಯಸದೆ । ಕಣ್ಣಡಿಯನಂಘ್ರಿಯನು ಭಜಿ
ಸುತ ಮಯಣನಂ ಗೆಲ್ದು ॥೧೩॥

ಕಾಲಕಾಲದಿ ಲಿಂಗಪೂಜೆಯ । ಶೀಲದೊಡನೆಸ
ಗುತ್ತ ಶಿಷ್ಯರ । ಜಾಲಕಂ ಷಟ್ಸ್ಥಲದ ಮರ್ಮಂಗಳನು
ಬೋಧಿಸುತೆ ॥ ಲೀಲೆಯಿಂದಿರುತಿರಲು ಭಕ್ತರು । ಮೌ
ಲಿಯನು ಬಾಗಿಸುತ ಮನದನು । ಕೂಲವಹವರಗಳನು
ಪಡೆಯುತ್ತಿರ್ದರನವರತಾ ॥೧೪॥

ಹೊಟ್ಟೆಬ್ಯಾನಿಯ ನೆತ್ತಿಶೂಲಿಯ । ಕೆಟ್ಟರೋಗಗ
ಳುಳ್ಳರುಂ ಮನ । ಮನಮುಟ್ಟಿ ಭಜಿಸಲ್ಕವರ ಕಷ್ಟಗಳೆಲ್ಲ

ಪೋಗುವವೂ ॥ ಚಿಟ್ಟನೇ ಚೀರುತ್ತ ಪಿರಿತಿನಿ । ಮೊಟ್ಟ
ಗಳೋಡುತ್ತ ಮಿರ್ಪವು । ಪಟ್ಟದೊಡೆಯರ ಕೀರ್ತಿ
ರ್ಬಿತು ದೇಶದೇಶದೊಳು ॥೧೫॥

ಜನಸಮೂಹಂ ಬಂದು ತಮ್ಮಯ । ಮನದಹ
ಕೆಯ ಬಡೆದು ಪೋಪರು । ಬಿನದದಿಂ ಗುರುಚನ್ನಬ
ವನು ಸಕಲವೈಭವವಾ ॥ ತೃಣಕೆಸಮುಗಂಡವನು ತೊ
ಯುತ । ಘನಮುಹಿಮನಲ್ಲಲ್ಲಿ ಚರಿಸುತ । ಲನುನಯದಿ
ಸಿರಿನಾರಶೈಲವನಡರಿ ನೋಡಿದನೂ ॥೧೬॥

ಶಿವಯೋಗಸಾಧನಕೆಯುಗಣಿತ । ಗವಿಗಳೊಪ್ಪಿ
ಹವಲ್ಲಿ ಮುನಿಗಳ । ನಿವಹಮುತ್ಯಾನಂದದಿಂ ನೆಲೆಸಿಪ್ಪರಪ
ವರತಾ ॥ ಭವರಹಿತಗುರು ಚನ್ನಬಸವನು । ತವಕದಿಂ
ದಾಗಿರಿಯ ಮಧ್ಯದಿ । ಪ್ರವಿಮಲಾನಂದದೊಳೆ ತಪಮಂ
ಗಯ್ಯಲೆಳಸಿದನೂ ॥೧೭॥

ಗುರುದೇವನೆಸಗುತಿಹ ತಪಸಿನ । ಪರಿಯನೆಲ್ಲವ
ಪೇಳಲದಳ । ಶರಿರಭೋಗಕ್ಕೆಳಸದಚಲಿತ ಮನದಿ ಶಂಕ
ರನಾ ॥ ಸ್ಮರಣೆಯಿಂ ಮರುತನನು ಬಂಧಿಸಿ । ಹರುಷ
ದಿಂದ ಜರಂಧ್ರದೆಡೆಯೊಳು । ಮಿರುಪಸುಖಮಂ ಸೇರಿ
ಕೆಲದಿನಮಿರ್ದು ತಿರುಗಿಸುತೇ ॥೧೮॥

ಪೊರಗಣರಿವಂವೆರಸಿ ಸ್ನಾನವ । ವಿರಚಿಸುತಶಿವ
ಲಿಂಗಪೂಜೆಯ । ವರನಿಗಮುವಿಧಿಯಿಂದಲೆಸಗುತ ಲಿಂ
ಗಮುಖದಿಂದೆ ॥ ತರುಲತೆಯ ಪರ್ಣವನು ಜಲಮಂ ।
ಪರಿಮಿತದಿ ಸೇವಿಸುತ ನಿತ್ಯದಿ । ಹರುಷದೊಡನೊಪ್ಪಿರ್ದ
ನಾನಂದಾಬ್ಧಿ ಹಿಮುಕರನೂ ॥೧೯॥



ಗೆಜ್ಜೀಭಾವಿಮಠದಲ್ಲಿರುವ ಶಿಲಾಮಂಟಪದ ಒಂದುಭಾಗದ ದೃಶ್ಯವು.

ಮೋದಕ ವೃ. ಗಿರಿವರನಂದನೆ ಶೌರಿಸ್ವರೂಪೇ । ಸುರಪತಿ ಸನ್ನುತಿಪಾತ್ರೆ ಪವಿತ್ರೆ । ಹರುಷದಿವಂದಿಪೆ ಗೌರಿ ಮದಂಬೆ । ಕರುಣದಿ ಪೋಷಿಸು ಶ್ರೀಭ್ರಮರಾಂಬೇ ॥೨೦॥

ಇದುವೆ ಶ್ರೀಗುರುಚನ್ನಬಸವನ । ಸದಮಲದ ಚಾರಿತ್ರ್ಯವತಿಶಯ । ಮುದದಿಪೇಳ್ದಂ ರುಚವೀಟಿಯ ಶಾಂತವೀರಾಖ್ಯಂ ॥ ಪದುಳದಿಂ ಕೇಳ್ವವರಬಯಕೆಯ । ನೊದವಿಸುವನಾಮಲ್ಲಿಕಾರ್ಜುನ । ಸದಯಮಾನಸದಿಂದಲಿಲ್ಲಿಗೆಯಾರನೆಯ ಸಂಧಿ ॥೨೧॥

ಇಂತು ಷಷ್ಠಾಧ್ಯಾಯಕ್ಕೆ ಮಂಗಲಂ.

## ಅಥ ಸಪ್ತಮಾಧ್ಯಾಯ ಪ್ರಾರಂಭಃ



ಸೂಚನೆ:- ಗುರುವಿನಪ್ಪಣೆಮೀರಿದೊಡ್ಡಪ್ಪ ।
ಪರಿಭವಣೆಗೊಳಗಾದನತ್ತಲು ।
ಸಿರಿಗಿರಿಯ ಯಮಿಗಳನು ಕಂಡ
ನು ಚನ್ನಬಸವೇಶಾ ॥

ಭೂಮಿಯೊಳು ವತ್ಸರವು ಮಾಸಗ । ಳಾಮಹಿತ ತಿಥಿರಾಶಿ ಭಗಣಂ । ಪ್ರೇಮದಿಂದಾನವಗ್ರಹಂಗಳು ಗಿರಿಶನಪ್ಪಣೆಯಿಂ ॥ ನೇಮದೊಳೆ ಫಲಗಳನು ಕೊಡುವವು । ಸ್ವಾಮಿಯಾಜ್ಞೆಯ ಮೀರವೆನಲಾ । ಶ್ರೀಮಹಾಮಲ್ಲಯ್ಯನಂ ಬಲಗೊಂಬೆನುತ್ತವದೀ॥೧॥

ಶಿವಯೋಗಸಂಧಾನಮೆಸಗುತ । ಶಿವಲಿಂಗಪೂಜೆ ಯನುಗಯ್ಯುತ । ಶಿವನಮಂತ್ರವನಾವಗಂಮುದದಿಂದೆ ಶಿಪಸುತ್ತೆ ॥ ಜನನಮಾಯೆಯಕಾವನಂಗೆಲಿ । ದವನಿಯೊಳಗಿಂತಪ್ಪ ಸಾಧನ । ನಿವಹಮರಿದವರಿಲ್ಲಮೆನಲೊಪ್ಪಿರ್ದನಾನಗದೀ ॥೨॥

ಇತ್ತಲೀಗುರುಸುಖದೊಳಿರುತಿರ । ಲತ್ತ ಮೆರೆದುದು ರಾಮದುರ್ಗವು । ಸತ್ಯನಿಧಿಶ್ರೀರಾಮಗೈದಿಹ ಗ್ರಾಮವೆಂತೆನಲೂ ॥ ಮತ್ತನಹ ರಾವಣನ ಹತಿಸುತ । ಲತ್ಯಧಿಕ ದೋಷವನು ಕಳೆಯಲು । ಸುತ್ತಲುಂ ಲಿಂಗಗಳನೆಲಸುತ ಬಂದುಮಾನಗದೋಳ್ ॥೩॥

ಲಿಂಗವನು ಸ್ಥಾಪಿಸುತೆ ಕೆಳಗೆ ಮ । ನಂಗೊಳಿಪ ಗ್ರಾಮವನು ರಚಿಸಲು । ತುಂಗವಿಕ್ರಮನೆಸಗಿದುದಕಾ ರಾಮದುರ್ಗೆಂಬಾ ॥ ಮಂಗಲದ ಪೆಸರಾದುದದರೊಳು । ಜಂಗಮರಸಂದೋಹ ಭಕ್ತರ । ವಂಗಡಂ ಮೆರೆಯುತಿರಲವರೊಳಗೋರ್ವ ಶಿವಭಕ್ತಾ ॥೪॥

ಶಿವಪುರದ ದೊಡ್ಡಪ್ಪನೆಂಬುವ । ನವನನುಡದಿಯು ಮಕ್ಕಳೈವರು । ಭವಣೆಬಡುತಿರುತಿರ್ದನತಿಶಯಬಡತನಂ ಪತ್ತಿ ॥ ಭುವಿಯೊಳಾರುಂ ಕಂಡು ಕರೆಯರು । ತವಕದಿಂ ನಿಂದಿಸುವರೆಲ್ಲರು । ಶಿವಶಿವಾ ದಾರಿದ್ರ್ಯದೇಳ್ಗೆಯನಾರು ಬಣ್ಣಿಪರೂ ॥೫॥

ನೋಡಿನುಡಿಸರು ನುಡಿಸಲುತ್ತರ । ವಾಡರ್ಸ್ನರತಿವಿನಯದೊರಲು । ಮೂಢನಡೆಯುಮತ್ತೈದೆ ಜರೆವರು ಬೆ

ನ್ನೊಳುಂ ಬರಲೂ ॥ ಬೇಡಿದಪನೇನೆಂದು ಚರರಿಂ । ದೂಡಿಸುವರತ್ತತ್ತಮೆಂದೊಡೆ । ರೂಢಿಯೊಳು ದಾರಿದ್ರ್ಯದಂತಹ ಕಷ್ಟವೊಂದುಂಟೇ ॥೬॥

ನಳ ಪುರೂರವ ಸಗರ ಪಾಂಡವ । ರಿಳೆಯೊಳನುಪಮ ಪುಣ್ಯಚರಿತರು । ಮುಳಿದುಪೋದರು ಮಿನ್ನವರ ಮಿಾಪಾಪಿದಾರಿದ್ರ್ಯ ॥ ಅಳಿಯದುಳಿದಿದೆ ಕಾಲಕಾಮರ । ನಳಿಕನಯನದಿ ಸುಟ್ಟಭರ್ಗನೆ । ಘಳಿಲಸೀಬಡತನವ ದಹಿಸುತ ಪೊರೆವುದೆನ್ನುವನೂ ॥೭॥

ಎಂದು ಪಲವಂದದಲಿ ದೊಡ್ಡಪ । ನಿಂದುಧಾರಿಯನೆನೆಯುತಂ ಮುದ । ದಿಂದ ತನ್ನಕುಟುಂಬಪೋಷಣೆಗಾಗಿ ಕಿರುದೆನಿಪಾ ॥ ಒಂದು ವ್ಯಾಪಾಸವನು ನಡೆಸುತ । ಬಂದಹಣದಿಂ ಜೀವಿಸುತನಯ । ದಿಂದಲಿರುತಿರುತೋರ್ಮೆ ಸಿರಿವಾರಕ್ಕೆ ನಡೆತಂದಾ ॥೮॥

ಬಂದು ಸಿರಿವಾರದೊಳು ತಾಂಪಲ । ವಂದದಿಂದೆತ್ನೈಸಿ ನೋಡಿದೊ । ಡೊಂದು ದುಡ್ಡುಂ ದೆರಕದಿರೆ ದೊಡ್ಡಪ್ಪ ಮನಸಿನೊಳು ॥ ನೊಂದು ಕಷ್ಟಂಸೈರಿಸದೆ ಪುರ । ದಿಂದಪೊರಮಟ್ಟಡವಿಯೊಳು ಪರಿ । ತಂದುಮುಂದಿಹ ಪರ್ವತಪುನಡರುತ್ತ ನೋಡಿದನೂ ॥೯॥

ಅಲ್ಲಿ ಪಲವಂದದಲಿಚರಿಸುತ । ಮೆಲ್ಲನೈತರೆ ಮುಂದೆ ಪೊದೆಯೊಳು । ಭಲ್ಲುಕಂ ಪುಲಿಸರ್ಪಮೊದಲಹ ದುಷ್ಟಜಂತುಗಳು ॥ ಅಲ್ಲಿ:ುವ ತಪಸಿಗಳಕಾಸಿಗೆ । ನಿಲ್ಲಿಸಿದ ತೆರನಂತದೊಪ್ಪಿರ । ಲೆಲ್ಲಮುಂ ನೋಡುತ್ತ ನಿರ್ಭಯದಿಂದ ದೊಡ್ಡಪ್ಪಾ ॥೧೦॥

ಬರುತಲಿರೆ ಮುಂದೊಂದುನಿರ್ಮಲ | ಸರಸಿಯೊ
ಪ್ಪಿದುದದರ ತೀರದೊ | ಳಿರುವ ಸುರುಚಿರ ಬಿಲ್ವತರುಗ
ಳಮಧ್ಯದೊಳು ಮೆರೆವಾ || ಪರಿಪರಿಯ ಕುಸುಮಗಳಪ್ಪ
ದಿದಿಹ | ವರಯೋಗಮಂಟಪದೊಳಚಲಿತ | ಶರಿರದಿಂ
ಶಿವಯೋಗಸುಖದೊಡನಿರ್ದಗುರುರಾಯಾ ||೧೧||

ಆ ಗುರೂತ್ತಮನಧಿಕತರಶಿವ | ಯೋಗಮಂ ಕಾ
ಣುತ್ತ ನಿಜಶಿರ | ಬಾಗಿಕರಗಳಮುಗಿದು ಭಕ್ತಿಯನಾಂ
ತುದೊಡ್ಡಪ್ಪಾ || ರಾಗದಿಂ ಕುಳಿತಿರುವ ಸಮಯದಿ |
ಯೋಗದಿಂದೆಚ್ಚತ್ತು ಯತಿವರ | ನಾಗಳಾಭಕ್ತನೊಳು
ಕರುಣದಿ ನುಡಿದನಿಂತೆಂದೂ ||೧೨||

ಎಲವೊ ನಿನ್ನಯಮಡದಿಮಕ್ಕಳ | ನಿಳಯದೊ
ಳು ತೊರೆದಿಂತು ಬರುವರೆ | ಘುಳಿಲನೇ ನೀನತ್ತಪೋಗೆ
ನಲಾಗ ದೊಡ್ಡಪ್ಪಾ || ಲಲನೆ ಸುತರುಂ ಬಾಂಧವರ್ಕ
ಳ | ಬಳಗಮೆನಿತೆನಿತಿರ್ದೊಡೇನಾ | ಕಳೆವೆತ್ತ ಸಿರಿಯಿ
ದ್ದೊಡೆಲ್ಲವು ಬೇಕು ಗುರುನಾಥಾ ||೧೩||

ಸಿರಿಯುಮೆನ್ನಲ್ಲಿಲ್ಲಮದರಿಂ | ಧರೆಯ ಭೋಗ
ಮದೆಲ್ಲ ಸಾಕೆಂ | ದೆರಗಿ ಪರಪರಿಯಿಂದನುತಿಸುವ ಭಕ್ತ
ನಂನೋಡಿ || ಕರುಣದಿಂದಿಂತೆಂದರೆಲೆ ಬಹು ತೆರದಸಂ
ಪದಸಿದ್ಧಿ ನಿನಗಹು | ದೊರೆಯದಿರು ಯುಮ್ಮಿರವನಾರ್ಗ
ಯು ನಂಬು ನೀನೆಂದೂ ||೧೪||

ಹರುಷದಿಂ ವರವಿತ್ತು ಕರುಣಿಸ | ಲೆರಗಿ ದೊಡ್ಡ
ಪವಿನಯದೊಡನಾ | ಗುರುವರನ ನಿಜನೆಲೆಯನರಿಯಲ್ಪ

ಯಸಿ ಬೆಸಗೊಳಲೂ ॥ ಪರಿಯನೆಲ್ಲವತಿಳುಪಿ ಯಲೆನೀ । ನರುಪದಿರು ಯಮ್ಮಿರವನಾರ್ಗೆಯು । ಮರೆದುಪೇಳಲು ನಿನ್ನಸಂಪದವುಳಿಯದಿದು ನಂಬೂ ॥೧೫॥

ಎಂದೊರೆಯಲದಕೇಳಿ ನಡಗುತ । ತಂದೆಯೇನಾ ನೆಂದಿಗೊರೆಯನು । ಛಂದದಿಂ ಸಲಹೆಂದು ಸಾಷ್ಟಾಂಗ ದೊಳು ನಮಿಸುತ್ತೆ ॥ ಮುಂದೆನಿಂದಿರಲಧಿಕಕರುಣದಿ । ಮುಂಹಾಸವಬೀರಿ ಫಲಗಳ । ವೃಂದವುಂ ಕೊಡುತೊಡ ನೆಯುಪ್ಪಣೆಯಿತ್ತು ಕಳುಪಿದರೂ ॥೧೬॥

ಗಿರಿಯೊಳನುದಿನ ತಪವನೆಸಗುತ । ಹರುಷದಿಂ ಗುರರಾಯನೊಪ್ಪಿರೆ । ಕರುಣವುಂ ಪಡೆದಿರ್ದ ದೊಡ್ಡ ಪನಾಗಳುತ್ಸವದೀ ॥ ತಿರುಗಿಬಂದನು ರಾಮದುರ್ಗಕೆ । ತರುಣಿಪುತ್ರರ ಮೇಳದೊಡನಾ । ಪುರದೊಳೆಂದಿನತೆರದಿ ವ್ಯವಹರಿಸುತ್ತ ಮಿರುತಿರಲೂ ॥೧೭॥

ಹರನೀವಕಾಲಕ್ಕೆ ಪರತರ । ಸಿರಿಯು ಬೆನ್ನಿಲಿ ಬ ಪ್ಪುದೆಂಬುವ । ಶರಣರುಕ್ತಿಯು ಸಟಿಯದಾಗುವದುಂ ಟೆ ಲೋಕದೊಳೂ ॥ ಹರುಷದಿಂ ದೊಡ್ಡಪ್ಪನಾಗುರು । ಚರಣವುಂ ನುತಿಸುತ್ತಲಿರುತಿರೆ । ಪರಿಪರಿಯ ಸಂಪದ ಗಳೊದಗಿದವಾಗಳೇನೆಂಬೆ ॥೧೮॥

ಪೊಲದೊಳುಂ ಪುರಗ್ರಾಮಪಕ್ಕಣ । ಗಳೊಳು ಮೆಲ್ಲಿಯು ಕಿರಿದು ಪಿರಿದಹ । ಪಲತೆರದ ವ್ಯವಹಾರದೊ ಳಗುಂ ಲಾಭವೇಲಾಭ ॥ ಕೆಲವುದಿನದೊಳೆ ಸಕಲವಿತ್ತ ವು । ಬಲಿದು ಪರತರಧನಿಕನೆನಿಸಿದ । ಲಲನೆಸುತರುಂ ಬಂಧುಬಳಗದ ಪರಿಷೆಪೆರ್ಚಿದುದೂ ॥೧೯॥

ಹೇರುವೆತ್ತಿನಹಿಂಡು ನೆರೆದವು । ವಾರುವಂಗಳ
ಸಾಲು ಮೆರೆದವು । ಊರಗಳೊಳಲ್ಲಲ್ಲಿ ಪಿರಿದಂಗಡಿಗ
ಳೆಸೆದಪವೂ ॥ ಕಾರಕೂನರು ಸೇವಿಸುವಪರಿ । ವಾರವ
ಗಡದಿಂದ ಜನರೊಳು । ಗೌರವದ ಪೆಂಪಾಂತು ಮೆ
ವುತಿರ್ದ ದೊಡ್ಡಪ್ಪಾ ।೨೦॥

ಮುನ್ನನಿಂದಿಪ ಜನಗಳೆಲ್ಲರು । ಮನ್ನಣೆಯನೀ
ಗುತ್ತಲಿಪ್ಪರು । ಅಣ್ಣ ಅಪ್ಪಾ ತಾತ ಮಾಮನೆನುತ್ತ ನಮಿ
ಸುವರೂ ॥ ಉನ್ನತವನೇನೆಂಬೆ ಧನಸಂ । ಪನ್ನನೇ ಸರ್ವ
ರೊಳು ಮಾನ್ಯನು । ರನ್ನವಸಿರೊಳಗವನನುಡಿಗಳ ಮಿ
ರರೆಂದೆಂದೂ ॥೨೧॥

ಧನಕನಹ ದೊಡ್ಡಪ್ಪನೀಪರಿ । ಜನರೊಳತಿಶಯ
ಸುಖದಿನೊಪ್ಪಿರೆ । ವನಿತೆಸುತರುಂ ಬಂಧುಬಾಂಧವ
ರೊಂದುದಿನದಲ್ಲೀ ॥ ವಿನಯದಿಂದಿಂತೆಂದರಾತಗೆ । ಘ
ನದರಿದರಿದತೆ ತೊಲಗಿ ನಿರುಪಮ । ಧನಕನಕಧಾನ್ಯಂಗ
ಳೊಗಿದವಾರ ಕೃಪೆಯಿಂದೇ ॥೨೨॥

ಯಂದು ಬೆಸಗೊಳಲಾಗ ಪರವಶ । ದಿಂದ ನುಡಿ
ದನು ಕುಷ್ಟಿಗೀಶನು । ತಂದೆ ಶ್ರೀಗುರು ಚನ್ನಬಸವನ।
ಕರುಣಮೆನುತೆನುತೆ ॥ ಕಂದಿದಾಮುಖದಿಂದ ಮೌನ
ದೊ ! ಳಂದು ನೆನೆದನು ಗುರುವಿನಾಜ್ಞೆಯ । ಮುಂದಿ
ನವರದನರಿದು ಪರಿಪರಿಯಿಂದ ಕೇಳಿದರೂ ॥೨೩॥

ಯೇನಕೇಳಲು ನುಡಿಯುವವನನು । ಮಾನದಿಂ
ಚಿಂತಿಸುತಲಿರೆ ನಿಜ । ಮಾನಿನಿಯು ಬಲ್ಲಿಂದೆ ಕುಷ್ಟಿಗಿಗು

ರುಗಳವರಾರೂ ॥ ಮಾಣದುಸುರುವದೆಂದುಬೆಸಗೊಳ | ಲಾನದೆಲ್ಲವ ತಿಳುಗಲೆಮಗತಿ | ಹಾನಿ ಬಪ್ಪುದು ಲಲನೆ ಯದನಾರ್ಗರುಪಬಾರದೆನೆ ॥೨೪॥

ಬಂಧುಗಳು ಪರಿಪರಿಯನೆನವದೊಡ | ನಂದುಕೇಳಲು ಕೆಡುವಕಾಲಕೆ | ಮಂದಬುದ್ಧಿಯು ಬರುವದೆಂಬುವನೀತಿ ತಪ್ಪುವದೇ ॥ ಒಂದುಳಿಸದೆಲ್ಲವನು ತಿಳಿಸುತ| ಲಿಂದುಧರಗುರು ಚೆನ್ನಬಸವನು | ಬಂಧುರದತಪಮೆಸಗುತಿರ್ದಪನೀಗ ಶೈಲದೊಳೂ ॥೨೫॥

ಆಗುರೂತ್ತಮನಿತ್ತವರದಿಂ | ಮೇಲೆನಿಪಸಂಪದಗಳೊದಗಿಹ | ಈಗಳೆಮಗೆನಲದಕೆಮೆಚ್ಚಿದರಖಿಳಬಂಧುಗಳೂ ॥ ಆಗಳಗ್ನಿಯು ಪತ್ತಿಯುದ್ಭುತ | ಬೇಗೆಯಿಂ ಮನೆ ಬೆಂದುಪೋದುದು | ಭೋಗಭಾಗ್ಯಗಳಳಿದು ಕನಸಿನ ಪರಿಯು ಬಯಲಾಗೇ ॥೨೬॥

ನಿಮಿಷದೊಳಗಲ್ಲಲ್ಲಿ ನಡೆಯುವ | ಕ್ರಮದ ವ್ಯಾಪಾರಗಳು ನಿಂದವು | ಅಮಿತದುಃಖದೊಳಾಗ ಕಂಬನಿಗರೆದು ದೊಡ್ಡಪ್ಪಾ ॥ ಯಮಿವರನ ನುಡಿಗಳನು ಮೀರಿದೆ | ಭ್ರಮಿತನಾದೆನು ಮೋಹಪಾಶದಿ | ವಿಮಲಚರಿತರ ಕರುಣತಪ್ಪಿದೊಡುಳಿವದೊಂದುಂಟೇ ॥೨೭॥

ಪಲವು ನೆನೆದುಂ ಚಿಂತಿಸುತ್ತಿರೆ | ಲಲನೆಸುತರುಂ ಬಂಧುವರ್ಗವು | ಮಲಮಲನೆ ಮರುಗುತ್ತ ದುಃಖಿಸುತೆಂದರಾತಂಗೇ ॥ ಮಲಹರನು ತಪಮೆಸಗುತೊಪ್ಪುವ | ನೆಲೆಗೆ ಸರ್ವರು ಪ್ರೋ[illegible]ವುದು | ಜಲರುಹಂಗಳಪೊ

ತ್ತ ಸಿರಿಯಂ ಪಡೆವುದುತ್ತಮವೂ ॥೨೮॥

ಎಂದದನೆ ನಿರ್ಧರಿಸಿ ಸರ್ವರು । ಸಂದಣಿಸಿ ಬಹು ತಿರ್ದರಿತ್ತಲು । ಇಂದುಧರನಿಭ ಚನ್ನಬವನು ತಿಳಿದನೆಲ್ಲ ವನೂ ॥ ಮುಂದಮುತಿಗಳಸಂಗನಮುಗೇ । ಕೆಂದುಬ ಗೆದಾಗಿರಿಯತೊರೆಯುತ । ನಂದಿಮುಂಡಲದತ್ತನಡೆದ ನು ನಗುತೆ ಗುರುನಾಥಾ ॥೨೯॥

ಯಲ್ಲರೊಡನೈತಂದು ದೊಡ್ಡಪ । ಮೆಲ್ಲನಾಪರ್ವ ತಮುನಡರುತ । ಲಲ್ಲಿನೋಡಲು ಮೊದಲತಾಣದೊಳಭವ ಸನ್ನಿಭನೂ ॥ ಇಲ್ಲದಿರೆ ಬೆರಗಾಗಿ ಚಿಂತಿಸು । ತಲ್ಲಲ್ಲಿ ಪು ಡುಕುತ್ತ ಕಾಣದೆ । ತಲ್ಲಣಿಸುತಖಿಳರ್ಗೆ ಪೇಳ್ದನು ಸೆಡೆ ಯುತೊಂದೊಂದೂ ॥೩೦॥

ಗುರುದೇವನಿಲ್ಲಿರ್ದನೆನ್ನಗೆ । ಪರಮಫಲಗಳನಿತ್ತ ನಿಲ್ಲಿಯೆ । ಮರೆಯಬೇಡೆನುತೆಲ್ಲಮಂ ತಿಳುಪಿದನುಮಿ ನೆಲೆಯೋಳ್ । ಹರುಷದಿಂ ಪೊಡಮಟ್ಟು ವಿನಯದಿ । ಚರಣಮಂ ಪೂಜಿಸಿದೆನಿಲ್ಲಿಯೆ । ಕರುಣಿಸಿದರೆನಗತುಳ ಸಂಪದಸಿದ್ಧಿಗಳನಿಲ್ಲೀ ॥೩೧॥

ಇಂತುಕಂಬನಿಸುರಿಸಿ ಪರಿಪರಿ । ಚಿಂತಿಸುವದೊಡ್ಡ ಪ್ಪಗೆಂದರು । ಕಂತುಹರನಾಜ್ಞೆಯನು ಮೀರುವರಾರು ಮೀಜಗದೀ ॥ ಭ್ರಾಂತಿಯಿಂದಲೆ ಕೆಟ್ಟವಾಗುರು । ವೇ ತು ದೊರಕುವನೆಂದು ನಂಬುಗೆ । ಯಾಂತುಪುಡಕಲ್ವೇ ಹುದೀಜನರಿಲ್ಲದಚಲನೊಳ್ಳು ॥೩೨॥

ಎಂದು ಪಲವುಂ ನೀತಿಮಾತುಗ | ಳಿಂದ ಸಂತೈಸಲ್ಕೆ ದೊಡ್ಡಪ | ಬಂಧುವರ್ಗದ ಪ್ರೇಮಪಾಶದಿಕಟ್ಟುವಡೆದಾಗಾ || ಬಂದರಲ್ಲಿಂ ರಾಮದುರ್ಗಕೆ | ಬೆಂದಮನೆಯೊಳಗುಳಿದತಾಣದಿ | ನಿಂದರಾತನ ಮಡದಿಮಕ್ಕಳು ಸಹಿತ ಚಿಂತೆಯೊಳೂ ||೩೩||

ವಿತ್ತಮುಳ್ಳನ್ನಬರಮೆಲ್ಲರು | ಮುತ್ತುವರು ಪ್ರೆಮದೊಡನಾತನ | ವಿತ್ತತೀರ್ದೊಡೆ ನಿಂದಿಸುತ್ತಿಹರಖಿಳಮಾನವರೂ || ವಿತ್ತಮೇಜೀವನಸಃದಾಗಿಹು | ದುತ್ತಮನು ದೊಡ್ಡಪ್ಪಘುಳಿಸಿದ | ವಿತ್ತಮುಳಿಯಲು ಸೇರದಾದರು ಸಕಲಬಂಧುಗಳೂ ||೩೪||

ಧನಿಕತನದಿಂದೇಳ್ಗೆಯೊಂದಿದ | ಮನುಜಗಾದಾರಿದ್ರ್ಯಕಷ್ಟವ | ನನುಭವಿಪೊಡತ್ಯಂತನಾಚಿಕೆ ಬರುವದೀತೆರದೋಳ್ || ಮನದಿಚಿಂತಿಸಿ ಚನ್ನಬಸವನ | ನೆನೆಯುತಿರಲಾಗುರುವರೇಣ್ಯನು | ಕನಸಿನೊಳು ಕಾಣಿಸುತಲಭಯವನಿತ್ತು ಪೇಳಿದನೂ ||೩೫||

ಯಮ್ಮಮಾತಂ ಮೀರಿದುದಕೀ | ಯುಮ್ಮಳವು ನಿನಗಾಯ್ತು ದೊಡ್ಡಪ | ಒಮ್ಮನದೊಳಿನ್ನಾದೊಡಂ ನೆರೆನಂಬುಶಂಕರನಾ || ನೆಮ್ಮುವದು ಬೇಪನಿತ ಸಂಪದ | ಹಮ್ಮಿನಿಂಕೆಡುತಿಪ್ಪನೆಲ್ಲವು | ತಮ್ಮಮೆರೆಯಲ್ಬೇಡವೆನುತಚ್ಚರಿಸಿ ಬಯಲಾದ ||೩೬||

ಅರಿದನಾದೊಡ್ಡಪ್ಪ ಕನಸಿನ | ಪರಿಯನೆಲ್ಲವ ನೆನೆದು ಗುರುವರ | ನೊರೆದ ವಾಕ್ಯವನಂಬಿ ವ್ಯವಹರಿಸುತ್ತ

ಸತಿಸುತರೂ ॥ ಪರಮಪೌತ್ರರುಸಹಿತಸಕಲರು । ಹರು
ಷದೊಡನಿರುತಿಪ್ಪರಿತ್ತಲು । ಕರುಣಸಾಗರನತ್ತಲಾನ
ನಂದಿಮಂಡಲದೀ ॥೩೭॥

ಕೆಲವುದಿನಶಿವಯೋಗವೆಸಗುತ । ನಲುಮೆಯಿಂ
ದದ ನುಳಿದು ಮೋಕ್ಷದ । ನೆಲೆಯುನಿಪ ಶ್ರೀಗಿರಿಯನ
ಡದರ್ಾಮಲ್ಲಿಕಾರ್ಜುನನಾ ॥ ಲಲನೆ ಶ್ರೀಭ್ರಮರಾಂಬಿ
ಯುಭಯರ । ಚಲುವಪದಗಳಿಗೆರಗಿ ನಗದೊಳು । ಪಲ
ತೆರದ ಚೋದ್ಯಗಳನೋಡುತ ಚನ್ನಬಸವೇಶಾ ॥೩೮॥

ಗಿರಿಯೊಳತಿನಿರ್ಭಯದಿ ಚರಿಸುತ । ಲಿರುವಸರಿ
ಯಂ ತಿಳಿದು ಶಂಕರ । ಕರುಣದಿಂ ಕರದೊರ್ವಭೈರವ
ಗಿಂತು ಪೇಳಿದನೂ ॥ ತರುಳನಹ ಶ್ರೀಚನ್ನಬಸವನು।
ತೆರಳುತಿಹನೆತ್ತೆತ್ತಲಾತನಿ । ಪರಿವಿಡಿದು ನೀಂಪೋಗಿ ಕಾ
ಪಾಡುವದು ಮರೆಯದಲೇ ॥೩೯॥

ಈ ತೆರದಿ ಬೆಸಸಲ್ಕೆ ಭರ್ಗನ । ಮಾತುಮನ್ನಿಸಿ
ಭೈರವೇಂದ್ರನು । ಪ್ರೀತಿಯಿಂದಾಚನ್ನಬಸವನ ಪಿಂದೆ ಬ
ರುತಿರಲೂ ॥ ಭೀತಿಯಿಲ್ಲದೆ ಗುರುವರೇಣ್ಯನು । ಮಾತು
ಮಾತಿಗೆ ಶಿವನಮಂತ್ರವ । ನೋತು ಜಪಿಸುತ ಸಕಲ
ಚೋದ್ಯವನೋಡುತ್ತೈದಿದನೂ ॥೪೦॥

ನೆಳಲಗತ್ತರಿತುಳಿದು ಪಾಪಿಯು । ಚಲುನೂನ್ನೆತ್ತಿ
ಮೋಹಿಸಿ । ಕಲಭಗಳನಡದರ್ಲ್ಲಿಯುನಲಸರೋವರವ
ದಾಂಟೀ ॥ ಬಿಳಿಯ ಕೆರಡಿಯ ಕರಿಯಹಂಸವ । ಪಲತೆ
ರದ ತರುಲತೆಯ ಮಿಗಗಳ । ಜಲಚರಂಗಳ ಖಗಸ
ಮೂಹವ ನೋಡುತ್ತೈದಿದನೂ ॥೪೧॥

ಭಸಿತದಗಗಳ ರುದ್ರನಯನದ । ವಿಸರದಚಲವ ಸಿದ್ಧರಸದಿಂ । ಮಿಸುಪಕೂಪವ ಪರುಷಚಿಂತಾಮಣಿಯ ವೊರಡಿಗಳಾ ॥ ಪೊಸಪರಿಯ ಕಥೆವೇಳ್ವ ನಗಿಸುವ । ಸ ಸಿನೆಯಿಂ ಸವಿವಾತನಾಡುವ । ಜಸವೆತ್ತ ಗಿಡಬಳ್ಳಿ ಖಗ ಮೃಗಗಳನು ನೋಡಿದನೂ ॥೪೨॥

ದೇವದಾನವ ಸಿದ್ಧಸಂಕುಲ । ಕಾವಗಂ ವಶನು ಲ್ಲದಿರುತಿಹ । ತಾವಿನೊಳು ನಿರ್ಭಯದಿಸಂಚರಗೈವುದಂ ನೋಡೀ ॥ ಭಾವದೊಳು ಬೆರಗಾಗಿ ಭೈರವ । ನಾವಿಮಳ ಗುರುದೇವನನುಪಮ ಪಾವನೋತ್ತಮ ಮಹಿಮೆಗಳ ಬಣ್ಣಿಸುತೆ ಬರುತಿರ್ದಾ ॥೪೩॥

ಕದಳಿಬನದೊಳು ಸುಳಿದು ಬಿಲ್ವದ । ಪೊದೆಯ ನೋಡುತ ಮುಂದೆ ಶೋಭಿಪ । ಸದಮಲದ ಶ್ರೀಬಸವ ಸರಸಿಯದಾಂಟ ಗುರುವರನೂ ॥ ಮುದದಿಬರುತಿರ ಲೊಂದುಸಿದ್ಧಿಯ । ಸದನವೊಪ್ಪಿಹುದದರ ಬಾಗಿಲ । ಕದಗಳಾಗಿಹವೆರಡು ತೇಳ್ಗಳು ಭೀಮರೂಪಿಂದೇ ॥೪೪॥

ಆನನಕೆಯಾನಡವಗೂಡಿಸಿ । ಯಾನಿಸುತ ಪುಚ್ಛಂ ಗಳೆರಡಂ । ಮಾಣದಂದದಿ ಮೇಲೆಪೊಂದಿಸಿ ಕಿಡಿಯನು ಗುಳುತ್ತೇ ॥ ಮೌನಿಗಳಿಗಾವಾಸವಾಗಿಹ । ತಾಣವನು ಕಾಯ್ದಿಪ್ಪತೆರನಂ । ಜ್ಞಾನನಿಧಿಶ್ರೀಚನ್ನಬಸವಂ ಕಂಡು ಸಂತಸದೀ ॥೪೫॥

ಭೀತಿಯಿಲ್ಲದೆಗವಿಯಪೊಕ್ಕನು । ಮಾತನತಿಶಯಸಾ ಹಸಕೆಮನ । ಸೋತವಾಶ್ಚರ್ಯತಭೈರವಂಶಿರವನುಗಿದುನು

ತಿಸುತಿರೇ ॥ ಪ್ರೀತಿಯಿಂಗುರುಚನ್ನಬಸವನು । ಆತಪಸ್ವಿಗಳಲ್ಲಿ ನೆಲಸಿಹ । ರೀತಿಯಂ ಕಂಡೆಲ್ಲಯಮಿಗಳ ತಪಕೆ ಮೆಚ್ಚಿದನೂ ॥೪೬॥

ಅಲ್ಲಿ ಮುನಿಗಳು ಮನವನಾಶಿವೆ । ಯೊಲ್ಲಭನಚರಣದೊಳು ನಿಲಿಸುತ । ಸಲ್ಲಲಿತಶಿವಯೋಗನಿವ್ರಾಮುದ್ರೆಯೊಳುಸಂದೂ ॥ ಯಲ್ಲ ಕರಣದವಿಷಯಚೇಷ್ಟೆಗ । ಳಿಲ್ಲದಚಲಿತ ಪದದೊಳಿಸೆದಿರೆ । ಬಲ್ಲಗುರುವರನಾ ನೆಲೆಯೊಳಿರಲೆಳಸಿದನು ಮುದದೀ ॥೪೭॥

ಸರಸಿಯೊಳು ಮಿಂದಲ್ಲಿ ಸಿದ್ಧಿಯ । ಪರತರಾಸನದೊಡನೆ ಲಿಂಗವ । ಪರಿಪರಿಯ ವಿಧದಿಂದಲರ್ಚಿಸಿ ಸಜ್ಜೆಯೊಳಗಿರಿಸೀ ॥ ಚರಿಸುತಿಹ ವಾಯುವನು ನಿಲ್ಲಿಸಿ । ಪರಮಜೀವರನೊಂದುಗೂಡಿಸಿ । ಪೂರಗಣರಿವಂ ಮರೆದು ಸುಖದೊಡಸಿರ್ದಗುರುರಾಯಾ ॥೪೮॥

ಇಂತು ಪಲವುಂಕಾಲಮಿರುತಿರ । ಲಂತಲ್ಲಿ ತಪಗೈವಮುನಿಗಳು । ಸಂತಸದಿ ಕಣ್ದೆರೆದು ಮುನಿಕುಲಪುಂಗವನಕಂಡೂ ॥ ಮುಂತೆಯಿಲ್ಲದ ಪೊಸತಪೊಧನ । ನೆಂತುಮಿತಾಣದೊಳು ಬಂದನೊ । ಕಂತುವೈರಿಯಕರುಣಮಿಲ್ಲದೆ ಸಾಧ್ಯಮಾದಪುದೇ ॥೪೯॥

ಎಂದು ಸರ್ವರು ಜ್ಞಾನದೃಷ್ಟಿಯೊ । ಳಂದುತಿಳಿದರು ಕುಷ್ಟಿಗಿಯಪುರ । ದಿಂದಬಂದಿಹರೆಂಬುದಂ ತಪಗೈವರೀತಿಯನೂ ॥ ಸಂದೇಗವಸ್ಸೆಳಿ ಪಸಿಬಲಧಿಕಾ । ಸಂ

ದಧಿಂ ನುತಿಸಿದರುವೂಾಮುನಿ । ವೃಂದದೆದುರೊಳೆ ತಪ ವರ್ತೀರ್ಚಿಸುತೆಚ್ಚರವನಾಂತೂ । ೫೦॥

ಗುರುವರರನು ಶಿವಮಂತ್ರಪಠಿಸುತ । ಲಿರಲುಸರ್ವ ರುಬಂದು ನಮಿಸುತ । ಹರುಷಮಿಗೆ ಕೊಂಡಾಡಿ ಮುನಿ ಗಳು ನುಡಿದರಿಂತೆಂದು ॥ ಧರೆಯಭೋಗಮದಿನ್ನುತೀ ರದೆ । ತೊರೆದು ನೀವೀನೆಲೆಗೆಬಂದುದು । ಪರತರಾದ್ಭು ತಮುಲ್ತೆನುತ ಗುಣಮಾಲ ಶುಭಶೀಲಾ ॥೫೧॥

ಎಂದು ಸರ್ವರು ನುಡಿಯುಲದಕಾ । ನಂದದಿಂ ದುತ್ತರವನಿತ್ತನು । ಬಂಧುರದಶಿವಯೋಗಸುಖದೊಡನಿ ರ್ಪುದೇಘನವೂ ॥ ದಂದುಗದ ರಂಜನೆಯುತೊಡಕದು । ಎಂದಿಗಾದರು ತೀರದಿರುವದು । ಮಂದಮತಿಗಳದೆರದಿ ಸಂಸೃತಿಬಂಧನದೊಳಿಹರೇ ॥೫೨॥

ಆನುಡಿಗೆ ಮೆಚ್ಚುತ್ತಮುನಿಗಳು । ಜ್ಞಾನನಿಧಿಗಿಂ ತೆಂದು ಪೇಳ್ದರು । ಕ್ಷೋಣಿಯೊಳ್ದೇಹವನು ಧರಿಸಿದಸ ಕಲ ಪ್ರಾಣಿಗಳೂ ॥ ಸ್ಥಾಣುವಿನ ಆಜ್ಞೆಯನು ಮೀರದೆ। ಯೂನಿಶಾದಿವದಲ್ಲಿ ವರ್ತಿಪ । ವೇನಬಯಸಲು ಭೋ ಗಮಿಲ್ಲದೆ ಬರುವದೆಂಂದುಂಟೇ ॥೫೩॥

ಆದಡಂ ಶಿವಯೋಗಿವರ್ಯರ । ಮೋದದಂತೆಸ ಗುವನುಶಂಕರ । ಭೋದಯಾನಿಧಿನೀವುಮಾಜಗದಘವ ಕಳೆಯಲ್ಕೆ ॥ ಸಾದರದಿಬಂದಿರ್ದು ಜನರಿಗೆ । ಬೋಧಿಸ ದೆ ಶಿವತತ್ವಮಾರ್ಗವ । ನೀಧರಾಧರದಲ್ಲಿ ನೆಲಸಿರಲೇನು ಫಲವೆಂದೂ ॥೫೪॥

ಪರಿಪರಿಯ ವಿನಯೋಕ್ತಿಯಿಂದಲಿ । ಧರೆಗೆಪೋಗುವದೆಂದು ಬೆಸಗೊಳೆ । ಗುರುವರನು ಯತಿಪತಿಗಳಾಡಿದ ನುಡಿಗೆ ಮೆಚ್ಚಿದನೂ ॥ ಹರುಷದಿಂದಾಮುನಿಗಳೆಲ್ಲರು । ಕರದಿಪಿಡಿಯಲ್ದಂಡಮೊಂದನು । ಪರಮಭಿಕ್ಷಾಪಾತ್ರೆಯೊಂದಂ ಕಾಣ್ಕೆಯಾಗಿತ್ತು ॥೫೫॥

ನಮಿಸಲಾಮುನಿವರರು ಕೊಟ್ಟಹ । ವಿಮಲದಂಡಕಮಂಡಲಂಗಳ । ಸುಮನದಿಂ ಧರಿಸಿದರು ಮೂವಸ್ತುಗಳುಮಿನ್ನೆವರಂ ॥ ಕ್ರಮದೊಳಾಮಠದಲ್ಲಿ ಮೆರೆದವು । ಯಮಿಗಳೊಡನಾಚನ್ನಬಸವನು । ಪ್ರಮುದದಿಂ ಶ್ರೀಗಿರಿಯಮಧ್ಯದಿ ಮೆರೆವುತಿಹನಿಂತು ॥

ಅಶ್ವತಿಲಕವೃತ್ತ ಹಿಮಗಿರಿಬಾಲೇ ಭಕ್ತಜನಪಾಲೇ ಸಾಂಬನನುಕೂಲೇಶಾಂಕರೀ ಸದಾ । ಸುಮನಸವಂದ್ಯೆ ಯುಕ್ತಶುಭಬೃಂದೇ ದೈತ್ಯಕುಲಭಿಂದೇ ಮೂಲಶಕ್ತಿಯೇ ॥ ಯಮಿಗಣಪ್ರೀತೇ ವಿಷ್ಣುಹರಮಾತೆ ಪ್ರೇಮಗುಣಪೂತೇ ಸೌಖ್ಯರಾಶಿನೀಂ । ಪ್ರಮುದದೊಳೀಗ ಪಾಲಿಪುದು ಬೇಗ. ಶ್ರೀಭ್ರಮರಾಂಬಿಕೆ ನಿನ್ನ ನಂಬಿದೆ ॥೫೭

ಇದುವೆ ಶ್ರೀಗುರು ಚನ್ನಬಸವನ । ಸದಮಲದಚಾರಿತ್ರ್ಯವತಿಶಯ । ಮುದದಿ ಪೇಳ್ದಂ ರಾಚವೀಟಿಯ ಶಾಂತವೀರಾಖ್ಯಂ ॥ ಪದುಳದಿಂ ಕೇಳ್ವವರ ಬಯಕೆಯ । ನೊದವಿಸುವನಾಮಲ್ಲಿಕಾರ್ಜುನ । ಸದಯಮಾನಸದಿಂದಲಿಲ್ಲಿಗಿದೇಳನೆಯ ಸಂಧೀ ॥೫೮॥

ಇಂತು ಸಪ್ತಮಾಧ್ಯಾಯಕ್ಕೆ ಮಂಗಳಂ.

# ಅಥ ಅಷ್ಟಮಾಧ್ಯಾಯ ಪ್ರಾರಂಭಃ



ಸೂಚನೆ:- ಪಂಪೆಯಾಣ್ಮನಕಂಡುನದಿಯಂ|
ಪೆಂಪಿನಿಂದಾಂಟುತ್ತಶಾಂತಿಯ|
ಸಂಪದದಿ ಪಸಿದಿರ್ದ ಪುಲಿಯಂ
ತಣಿಸಿದನು ಗುರುವು ||

ಮುದದಿ ಮೀರಿದ ತ್ರಿಪುರದನುಜರ | ವಧಿಸಲೋಸುಗಮೆಂದು ದಿವಿಜರು | ಮುದದಿ ಹರಿವಿಧಿಮುಖ್ಯಪಶುಗಳ ಕರ್ತೃವೆಂದೆನಿಪಾ || ಸದಮಲದಪಶುಪತಿಯುಪಟ್ಟವ | ನೊದವಿಸಲ್ಮುಪ್ಪೊಳಲನುರುಪಿದ | ಸದಯಶ್ರೀಗಿರಿಮಲ್ಲಿಕಾರ್ಜುನನೀಗೆ ವಿಜಯವನೂ ||೧||

ಗುರುವರನು ಶ್ರೀಗಿರಿಯ ಮಧ್ಯದೊ | ಳಿರುವ ಮುನಿಗಳ ಮಾತಿಗೊಪ್ಪುತ | ಹರುಷದಿಂ ಪೊರಮಟ್ಟನಲ್ಲಿಂ ಗೌರಿಶಂಕರರಾ || ಚರಣಕವನತನಾಗಿ ಶೈಲವ | ತೊರೆದು ಸೈಪಿನನೆಲೆಯುದೆನಿಸುವ | ಪರಮಪಂಪಾಕ್ಷೇತ್ರದೆಡೆಗಂ ಬಂದನಾಕ್ಷಣದೀ ||೨||

ಆ ನೆಲೆಯ ಮೂಲವನು ತಿಳಿಯಲು | ಭಾನುಕುಲದತ್ರಿಶಂಖುಭೂಪನು | ಸಾನುರಾಗದಿ ಗುರುಗಳಂಕೇಳಲ್ಕೆ ಶಪಿಸಿಹರೂ || ಜ್ಞಾನಿಗಳು ಮೌನಿಗಳು ನಿರುಪಮ | ದಾನಿಗಳಿಗಾವಾಸಮಾಗಿಹ | ತಾಣಗಳ ನೋಡುತ್ತಬಂದನು ವಿರೂಪಾಕ್ಷನೆಡೆಗೆ ||೩||

ಮೊದಲು ಪಂಪಾಂಬೆಯನು ಕಾಣುತ । ಮುದ
ದೊಳೆಲ್ಲಾ ಕ್ಷೇತ್ರಕೀನೆಲೆ । ಯಧಿಕವೆನೆ ಸೂಚಿಸುವ
ಶ್ರೀಗುಲಗುಂಜಿಮಾಧವನಾ ॥ ಸದನವೀಕ್ಷಿಸಿಯನ್ನಪೂ
ರ್ಣೆಯ । ಪದುಳದಿಂನೋಡುತ್ತ ಬಂದನು । ಮುದನಹ
ವಿರುಪಾಕ್ಷನಾಲಯುದೊಳಗೆ ಗುರುನಾಥಾ ॥೪॥

ದೇವಗೃಹದೊಳು ಪೊಕ್ಕು ಲಿಂಗವ । ನಾವಲ್ಲೋ
ಕಿಸಲೆಂದು ಬರುತಿರ । ಲಾವಿತಾನದಪೂಜಕರು ಬಹು
ವೇಗದಿಂ ತಡೆದೂ ॥ ಪಾವಕಾಕ್ಷನಮುಟ್ಟಿಪೂಜಿಸ । ಲಾ
ವತೆರದಧಿಕಾರನಿಮಗಿ । ಲ್ಲೀವಿಧದೊಳವಿಚಾರಮಾರ್ಗದಿ
ನಡೆಪುದನುಚಿತವೂ ॥೫॥

ಎಂದು ಬಿರುನುಡಿಯೊಡನೆ ಭೂಸುರ । ವೃಂದ ಜರೆಯ
ಲು ಗುರುವರನು ಮುದ । ದಿಂದಲಾವಿಪ್ರರಿಗೆ ಪೇಳ್ದನು
ಶಿವನ ಮಹಿಮೆಯನೂ ॥ ತಂದೆ ತಾಂ ತ್ರೈಜಗಕೆ ಭ
ಕ್ತರ । ಬಂಧುವೆನಿಸಿದ ಮೃಡನಚರಣವ । ಪೊಂದಿಪೂ
ಜಿಸಲೆಲ್ಲರಿಗೆಯಧಿಕಾರಮುಂಟೆಂದೂ ॥೬॥

ಪರಿಪರಿಯ ಶಾಸ್ತ್ರಾರ್ಥಗಳನಾ । ಧರಣಿಸುರರಿಂ
ಗೊರೆಯೆ ಕೇಳದೆ । ಜರೆದು ಕದಗಳಮುಚ್ಚಿ ಮುದ್ರೆಯ
ನಿರಿಸಿ ಪೋಗಲ್ಕೆ ॥ ಗುರುವರನು ನಸುನಗುತಲೊಪ್ಪಿರ ।
ಲರುಣನಡಗಲು ಮರ್ಬುಪರ್ಬಿರ । ಲಿರುಳೊಳೆಲ್ಲಾಜ
ನರು ಸುಪ್ತಿಯಪೊಂದಿ ಮಲಗಿದರೂ ॥೭॥

ನಿಶೆಯೊಳಾಗುರು ಚನ್ನಬಸವನು । ಅಸಮನಯ
ನನ ಕಾಂಬತಕದೊ । ಳೊಸೆದುಬಂದಾಗುಡಿಯ ಬಾ

ಗಿಲ ಕದಗಳಂ ಪಿಡಿದೂ ॥ ಕುಸುಮಶರನಂಗೆಲ್ದ ದೇವನೆ। ಸಸಿನೆಯಿಂ ತವಪದವ ತೋರುತ । ಲೊಸೆದು ಪಾಲಿಪು ದೆಂದು ನಿರ್ಮಲಭಾವದಿಂ ಭಜಿಸೀ ॥೮॥

ನಿಂದಿರುವಸಮಯದೊಳೆ ಮುದ್ರೆಯು । ಸಂದು ಕಳಚಿ ಧಡಂಮೆನುತೆ ಭರ । ದಿಂದಬಾಗಿಲುದೆಗೆಯಲೊ ಳಪೊಕ್ಕಾಗ ಗುರುವರನೂ ॥ ಚಂದದಿಂ ವಿರುಪಾಕ್ಷನೆ ದುರಿಗೆ । ಬಂದು ಪರಿಪರಿಯಿಂದೆ ನುತಿಸುತೆ । ತಂದೆ ವಿ ಪ್ರರು ಯನ್ನ ಜರೆದೀಕದವಮುಚ್ಚಿದರೂ ॥೯॥

ನೀನು ಕರುಣದಿತೆರೆದು ಯನ್ನಗೆ । ಕಾಣಿಸಿದೆ ಭವ ದೂರ ಭಕ್ತರ । ಮಾನಕಾಯುವ ಭಕ್ತವತ್ಸಲನಹುದು ನಿಜಮೆನುತೆ ॥ ಸಾನುರಾಗದಿ ಭಜಿಸಿ ಕರ್ಪುರ । ದಾನಿ ರಾಜನವೆತ್ತಿ ಬೆಳಗುತ । ಜ್ಞಾನಸಿಧಿ ಪರವಶದಿ ಘಂಟಾ ನಾದಮೊಸಗುತ್ತೆ ॥೧೦॥

ಜಯ ಪರಾತ್ಪರ ಶಂಭುಶಂಕರ । ಜಯುಸದಾಶಿವ ನೀಲಕಂಧರ । ಜಯ ಭವಾಂಬುಧಿಚ್ಛೈತ್ರ ದುರಿತಧ್ವಾಂತ ಹರಮಿತ್ರ ॥ ಜಯ ಮನೋಜಕೃತಾಂತಸಂಹರ । ಜಯ ವಿಯನ್ನದಿ ಸೋಮಶೇಖರ । ಜಯುನಮೋ ಪಂಪಾಧಿ ನಾಥಾ ಶ್ರೀವಿರೂಪಾಕ್ಷಾ ॥೧೧॥

ಎಂದು ಪರಿಪರಿಯಿಂದೆ ನುತಿಸುತೆ । ನಿಂದಿರುವ ಗುರುವರನ ನಿನದವ । ನಂದು ವಿಪ್ರರು ಕೇಳಿ ಗಡಬಡಿ ಸುತ್ತಲತಿಭರದೀ ॥ ಬಂದುನೋಡಲು ಕೆದವುತೆರೆದಿದೆ । ಛಂದದಿಂ ವಿರುಪಾಕ್ಷನಿದಿರೊಳು । ಮಂದಹಾಸದೊಳಿ ರ್ಪಯತಿಪನಕಂಡದರ್ಚರಕರೂ ॥೧೨॥

ಎಲವೊ ಇವನಾರ್ಪಗಲು ನೂಂಕಿದೊ । ಡೊಲ್ದುಯ್ಯೆದಿದನೀಗಪಿಡಿಯಿರಿ । ಬಲುಪಿನಿಂಬಿಗಿದಿಲ್ಲಿನಿಲ್ಲಿಸ್ಪೊಡೆಯಬೇಕೆನುತೇ ॥ ಕಲಕಲಧ್ವನಿಯಿಂದೆ ಬೆತ್ತವ । ಮಲಕಿನುರುಲಗ್ಗವನು ಕೊಂಡಾ । ಬಳಗಸಹಿತಂ ಬಂದುಪುಡುಕಿದರಾಗ ಗುರುವರನಾ ॥೧೩॥

ಇಲ್ಲಿರುವನೆಲ್ಲಿರುವನಾಕಡೆ । ಯುಲ್ಲಿರುವನಡಗಿರುವನೆನುತಂ । ಯಲ್ಲರತಿಭರದಿಂದ ಪುಡುಕಲು ಕಾಣದಂತಾದ ॥ ಮೆಲ್ಲನಾಪೂಜಕರು ಗುರುಕುಲ । ವಲ್ಲಭನ ಮಹಿಮೆಗಳ ಬಣ್ಣಿಸಿ । ಸೊಲ್ಲುಸೊಲ್ಲಿಗೆ ನುತಿಸತೊಡಗಿದರಿಂತುಭಕ್ತಿಯೊಳೂ ॥೧೪॥

ಕಳಚಿಬಿದ್ದಿದೆ ಬೀಗಮುದ್ರೆಯು । ಕಲುಷಹರವಿರುಪಾಕ್ಷದೇವನ । ಬಳಿಯೊಳಿನ್ನೆಗಮಿರ್ದಗುರುವರನೀಗಮಿಲ್ಲೆಂದು ॥ ಮಲಮಲನೆ ಮರುಗುತ್ತ ಜ್ಞಾನಿಯ । ನೆಲೆಯನರಿಯದೆ ನಿಂದಿಸಿದೆವೆನು । ತೊಲಿದು ಕಿಂಕರ್ವಾಣಭಕ್ತಿಯನಾಂತು ನುತಿಸಿದರೂ ॥೧೫॥

ಅನಿತರೊಳು ಗುರುನಾಥನೆಲ್ಲರ । ಕಣುಮನಕೆದೋರುತ್ತದೂರದೊ । ಳನಘಮಂತ್ರವ ಪಠಿಸುತತ್ವಾನಂದದಿಂದಿರುವಾ ॥ ಘನಮಹಾತ್ಮನಕಂಡು ಭೂಸುರ । ಜನರುಮಾವೈರಾಗ್ಯಮೂರ್ತಿಯ । ಮನವೊಲಿದುಪೂಜಿಸುವೆವೆನುತಂ ಬಂದು ಮುಸುಗಲ್ಕೆ ॥೧೬॥

ಆನೆಲೆಯೊಳವರಿಂಗೆ ಸಿಲುಕದೆ । ಸಾನುರಾಗದಿಮಾಯವಾಗುತೆ । ಜ್ಞಾನನಿಧಿಯಾಚೆಯೊಳ್ತೋರ್ದ

ನು ಮಿಂತುಪಲತೆರದಿಂ ॥ ಕಾಣುತಡಗುತಲಿರಲು ವಿಪ್ರ
ವಿ। ತಾನವತಿ ಬೇಸತ್ತು ಗುರುವಿನ । ನೂನವಹಿಮೆಯ
ಬಣ್ಣಿಸುತ ತಿರುಗಿದರು ತಮ್ಮೆಡೆಗೆ ॥೧೭॥

ಅತ್ತಲಾಗುರುಚನ್ನಬಸವನು । ಚಿತ್ತದೊಳು ಶಂಕ
ರನ ಭಜಿಸುತ । ಮತ್ತೆಮುಂಬರೆ ತುಂಗಭದ್ರಾನದಿಯು
ಪೂರ್ಣತೆಯಿಂ ॥ ಎತ್ತಲುಂ ಜಲಮಯದಿ ಶೋಭಿಸು ।
ತಿತ್ತು ಪಾಂಥರು ಬಂದುನೌಕೆಯ । ಪತ್ತಿ ದ್ರವ್ಯವನಿತ್ತ
ರಾಗಳೆ ನಾವಿಕರು ಮುದದೀ ॥೧೮॥

ನಾವೆಯನು ನಡೆಸುತಿರೆ ಗುರುವರ। ಧಾವಿಸುತೆ
ಬಂದೆಲವೊ ನದಿಯನು । ನೀವುದಾಂಟಿಸಿರೆಮ್ಮೆಗೆಂದೆನ
ಲದಕೆ ಒಪ್ಪದಲೇ ॥ ಗಾವಿಲರು ಮುಂದಕ್ಕೆ ತೆರಳಿಸ ।
ಲಾವಿಮಲಗುಣಿ ಚನ್ನಬಸವನು । ಸಾವಧಾನದಿ ಶಿವನ
ಭಜಿಸುತ ಪೊದೆದ ಕಂಬಳಿಯಾ ॥೧೯॥

ಪೊಳೆಯನೋಲ್ಪಾಸುತ್ತ ಹರುಷದಿ । ಕುಳಿತು ಭವ
ಸಾಗರವದಾಂಟಿಪ । ಕಲುಷಹರ ಶಂಕರನ ನುತಿಸುತ ಕ
ರದಲಾಕುಳವಾ ॥ ಒಲಿದು ನೌಕೆಯಪುಟ್ಟನಂದದಿ ಚ
ಲಿಸುತೈದಿದನಾಚೆ ತೀರಕೆ । ನಲುಮೆಯಿಂದಂಬಿಗರು
ಪಾಂಥರು ಕಂಡು ಪೊಗಳಿದರೂ ॥೨೦॥

ಈತನೇ ಭೂಲೋಕರುದ್ರನು । ಖ್ಯಾತಿಮಿಗೆ ಕಂಬ
ಳಿಯ ಪಾಸುತ । ಪ್ರೀತಿಯಿಂ ಪೊಳೆದಾಂಟಯ್ದಿದನೆಂ
ದು ಭಕ್ತಿಯೊಳೂ ॥ ಓತುಸರ್ವರುಬಂದು ಗುರುಕುಲ
ನಾಥನಂಘ್ರಿಗೆನಮಿಸಿ ಪೂಜಿಸು । ವಾತುರದಿ ಮುಸುಗ
ಲ್ಕೆ ಕಂಡಾಚನ್ನಬಸವೇಶಾ ॥೨೧॥

ಪಾಮರರ ಬಳಗದೊಳು ಸಿಲುಕನೆ । ಪ್ರೇಮದಿಂ ದತ್ತತ್ತನಡೆದನು । ಸೋಮಶೇಖರ ಘನಕೃಪಾಕರನೆಂದು ಭಜಿಸುತ್ತೇ ॥ ಆಮಹಾತ್ಮನಕಂಡು ಸಜ್ಜನ । ಸ್ತೊಮವಿವರಿದರಿದೆಂದು ಬಣ್ಣಿಸಿ । ಭೂಮಿಯೊಳಗಿಂತಪ್ಪತಪಸಿಯು ಕಾಣೆನೆಂದೆನುತೆ ॥೨೨॥

ಪರಿಪರಿಯ ವಿನಯೋಕ್ತಿಯಿಂದಾ । ಗುರುವರನ ಭಜಿಸುತ್ತಲೆಲ್ಲರು । ತೆರಳಿದರು ತಮ್ಮತ್ತಮ್ಮ ಮನೆಗಳಿಗಾಗ ಚನ್ನಾರ್ಯ್ಯ ॥ ಹರುಷದಿಂಬರುತಿರಲು ಮುಂಬಿನೊ। ಳಿರುವವೇಳುಂಗಡ್ಡಮುವುಗಳ । ಪರಿಯುಬಣ್ಣಿಸಿಪೇಳಲಸದಳ ವೇನನುಸುರುವೆನೂ ॥೨೩॥

ಒಂದಕೊಂದುವಿಶಾಲಮುನ್ನತ । ದಿಂದಮೆರೆವವು ಮಾನಗಂಗಳ । ಕಂಧರದೊಳಿಡಿಕಿರಿದು ಬೆಳೆದಿಹಪಲವು ವೃಕ್ಷಗಳೂ ॥ ಪಂದಿಪುಲಿವನಮಹಿಷಿ ಖಡ್ಗಿಯು । ದಂದಶೂಕಂ ವೃಕವು ಭಲ್ಲುಕ । ವೃಂದವೃಂದಂಗೂಡಿ ಚರಿಸುತ್ತಿಪ್ಪವಾನೆಲೆಯೋಳ್ ॥೨೪॥

ಪಲತರದ ತರುಗುಲ್ಮಲತೆಗಳ । ಬಳಗವೊಂದಕ್ಕೊಂದುಕೂಡಿರೆ । ಕಲಕಲಧ್ವನಿಯಿಂದೆ ಪಕ್ಷಿಗಳಲ್ಲಿ ನೆಲಿಸಿಹವೂ ॥ ಜಲಚರಂಗಳನಾಂತು ಶೋಭಿಪ । ಕೊಳಗಳುಂ ಪಳ್ಳಂಗಳೊಪ್ಪಿರೆ ಪ । ಗಲುಮಿರುಳೆಂದರಿಯಲಸದಳಮೆನಿಪತಮನಾಂತೂ ॥೨೫॥

ತೋರುತಿಹುದತಿಭೀಷಣದಕಾಂ । ತಾರಮದರೊಳಗೋರ್ವನೇ ಸಂ । ಚಾರಮಾಡಲ್ಕಸದಳಂ ಜನಸಂದ

ಣಿಯುಗೂಡೀ ॥ ಸಾರಖಡ್ಗವು ಮದ್ದುಗೊಳವೆಕ । ಠಾ
ರಿ ಮುಂತಾದವನು ಧರಿಸುತ । ದಾರಿಯಂ ನಡೆಯುತ್ತ
ಲಿಹರಾವಿಪಿನ ಮಧ್ಯದೊಳೂ ॥೨೬॥

ಖಗಕುಲಂಗಳ ನಿನದವನುಪಮ । ನಗಗಳೊಳೂ
ಪೆರ್ಬುಲಿಗಳರ್ಭಟೆ । ಬಗೆಬಗೆಯ ಮೃಗಜಾತಿಗಳ ಬ
ಹುಪರಿಯ ಶಬ್ದಗಳೂ ॥ ಪಗಲು ಕೂಗುವ ಕೌಶಿಕಂಗ
ಳು । ಬಗೆಗೆಭೀತಿಯ ನೀಗುವುದರೊಳು । ಪೊಗುವ
ಶೂರ ಕಾಣೆವೆನಲೊಪ್ಪಿತ್ತು ಕಾಂತಾರಾ ॥೨೭॥

ಇಂತಪ್ಪಕಾಡಿನೊಳಗೆಮ್ಮಯ । ಕಂತುಹರಚನ್ನಾ
ರ್ಯ ಸ್ತೋರ್ವನೆ । ಚಿಂತೆಯಿಲ್ಲದೆ ಶಿವನಭಜಿಸುತ ಬರುವಸ
ಮಯದೊಳೇ ॥ ಅಂತಲ್ಲಿಕಂಡುಪಸಿದಪೆರ್ಬುಲಿ ಭ್ರಾಂ
ತಿಯಿಂತಿರುಗುತ್ತ ಕೋಪವ । ನಾಂತುಘುಡುಘುಡಿಸು
ತ್ತ ಬಂದುದುಗುರುವಿನೆದುರಿನೊಳೂ ॥೨೮॥

ಬಂದು ಕಿಸುಗಣ್ಣಿಂದನೋಡುತ । ಲಂದುಬಾಯಂ
ತೆರದು ಬಹುಪರಿ । ಯಿಂದಲೊದರಿ ಮುಂಗಾಲನಖಗಳ
ಬಿಚ್ಚಿ ತೋರುತ್ತ ॥ ಪಿಂದೆಬಾಲವನೆಲಕೆ ಬಡೆಯುತ ।
ಮುಂದೆಕುಳಿತತಿರೌದ್ರರೂಪವ । ಪೊಂದಿಪ್ಪಪೇರ್ಬುಲಿ
ಯ ರೀತಿಯ ಕಂಡನಾಗುರುವೂ ॥೨೯॥

ಈ ತರಕ್ಷುವಿನಂತರಂಗದಿ । ಖ್ಯಾತಿಮಿಗೆ ನೆಲಿಸಿ
ಪ್ಪಶಿವನೇ । ಪ್ರೀತಿಯಿಂದೆನ್ನಯ ಶರೀರದಿ ವಾಸಗೈದಿಹ
ನೂ ॥ ಭೂತನಾಥನನುಳಿದು ಪೆರತೀ । ಭೂತಳದೊಳೊಂ
ದಿಲ್ಲಮುದರಿಂ । ದೀತೆರದಿ ಬಂದಿರ್ಪಪುಲಿಯುಂ ಶಿವನೆ
ತಾನೆನುತೇ ॥೩೦॥

ನಂಬುಗೆಯನಾಂತಚಲಭಾವದಿ । ಶಂಭುವಿನನೆನೆ
ಯುತ್ತ ಕುಳಿತನು । ಮುಂಬಿನೊಳಗಾವ್ಯಾಘ್ರವತಿಶಯ
ಭೀಮರೂಪಿಂದೇ ॥ ಅಂಬಕವತೆರೆದವರ ನೋಡುತ ।
ತಿಂಬುವಿಚ್ಛೆಯೊಳಿದ್ರ್ದುದನಿತಕೆ । ಸಾಂಬನನುಪಮ
ರುಣದಿಂದಾಪುಲಿಯು ಮೌನದೊಳು ॥೩೧॥

ಏನುಗಯ್ಯಲು ಬಾರದದು ಸು । ಮ್ಮಾನದಿಂ ಕು
ಳಿತಿರುವ ಸಮಯಕೆ । ಭಾನುವಸ್ತಮಿಸಿದನು ಕತ್ತಲೆ ಪ
ರ್ಬಿದುದು ಜಗದೀ ॥ ಆ ನಿಶೆಯೊಳಲ್ಲಿಪ್ಪ ಮಿಗಗಳು ।
ಜ್ಞಾನಮೂರ್ತಿಯು ಬಳಸಿ ನಿಂದತಿ । ದೀನಮುದ್ರೆಯೊ
ಳಿರುವವೆನೆ ಗುರುಮಹಿಮೆ ಪೊಸತಲ್ತೆ ॥೩೨॥

ಎನಿತುಭೀಕರ ಪ್ರಾಣಿಗಳುಬಂ । ದನ ವಿನಿಂಮು
ಸುಗಿದೊಡೆ ಗುರುವರ । ನಿನಿತು ಭಯಮಿಲ್ಲದಲೆ ಸಂತ
ಸದಿಂದ ಶಿವಪದಮಂ ॥ ನೆನೆಯುತಿರಲನಿತಕ್ಕೆ ಪೂರ್ವ
ದಿ । ದಿನಪನುದಯಿಸಲಾಗ ಪಾಂಥರು ॥ ಜನಸಮೂ
ಹಂಗೂಡಿ ಬಂದರು । ಭಸದೊಳಾನೆಲೆಗೆ ॥೩೩॥

ಬಂದು ನೋಡಲ್ಕನಿತರೊಳೆ ಭಯ । ದಿಂದಲೆಲ್ಲಾ
ಕ್ರೂರಮೃಗಗಳ । ಗೊಂದಣಂ ಗುರುನಾಥನಂಘ್ರಿಗೆ ನ
ಮಿಸಿ ತೆರಳಿದವೂ ॥ ಛಂದದಿಂದದನರಿದು ಸರ್ವರು ।
ನಿಂದುಕರಗಳ ಮುಗಿದು ಪರಮಾ । ನಂದನಿಧಿ ಗುರು
ಚನ್ನಬಸವನ ನೆಲೆಯುತಿಳಿದಂದೂ ॥೩೪॥

ದೇವ ನೀವಿಂದೀಭಯಂಕರ । ತಾವಿಗೇತಕೆ ಬಂ
ದಿರೆನೆ ಭವ । ದಾವದಾವಂ ನಿನ್ನೆಯ್ದಿದಿಡೆ ವೀತರಕ್ಷು

ಗಳೂ ॥ ಧಾವಿಸುತೆ ಬಂದೆಮ್ಮತಡೆಯಲು । ಮಾವಿಪಿನ ದೊಳಗಿರುಳುಗಳೆದೆವು । ಪಾವಕಾಕ್ಷನ ಪ್ರೇರಣೆಯದಿಂ ತೆಂದು ಬೆಸಸಲ್ಕೆ ॥೩೫॥

ಯಲ್ಲಮಂ ಕೇಳ್ದವರು ಗುರುಕುಲ । ವಲ್ಲಭನ ಚ ರಣಗಳಿಗೆರಗುತ । ಲೆಲ್ಲಿಯುಂ ಯಿಂತಪ್ಪಚೋದ್ಯವುಸ ರಿದುದಿಲ್ಲೆನುತೇ ॥ ಖುಲ್ಲಮೃಗಗಳು ಬಿಡುವವೇಮನ । ಬಲ್ಲತೆರದಿಂ ಹಿಂಸೆಗೊಳಿಪವು । ಮಲ್ಲದತಿಶಾಂತಿಯನು ತಳೆವಿಹುದಚ್ಚರಿಯುಮುತ್ತೆ ॥೩೬॥

ಎಂದು ಬಣ್ಣಿಸಿಗುರುವರನ ಮುದ । ದಿಂದ ಲೊ ಡಗೊಂಡನಿಬರಾನೆಲೆ । ಯಿಂದಕುಷ್ಟಿಗಿಮಠಕೆ ಬರ ಲಾಪುರದ ಭಕ್ತಜನ ॥ ವೃಂದದೊಡನೈತಂದು ಸ್ವಾಮಿ ಯ । ಮುಂದೆ ಸಾಷ್ಟಾಂಗದೊಳೆನಮಿಸುತೆ । ತಂದೆಸಲ ದಿನ ಮೂವತಾಣಿದೊಳಿರ್ದಿರೆಂದೆಸುತೇ ॥೩೭॥

ವಿನಯ ಮಿಗೆಬೆಸಗೊಳಲುಪೇಳ್ದರು । ಘನತರ ಶ್ರೀಗಿರಿಯಕ್ಷೇತ್ರದೊ । ಳನುನಯದಿ ತಪವಗೈದುಡನು ಮಾನೆಲೆಯೊಳೊಪ್ಪುತಿಹ ॥ ಮುನಿವರರು ಶ್ರೀನಾಗಬೆತ್ತ ವು । ನನಘಭಿಕ್ಷಾಪಾಪಾತ್ರೆಯಿತ್ತುದ । ನನಿತುವಂ ತೋರಿಸಲು ಸರ್ವರು ಮಚ್ಚರಿಯೊಳೆರಗೀ ॥೩೮॥

ಪ್ರೇಮದಿಂ ನುತಿಸುತಿರೆ ಪಥಿಕರ । ಸ್ತೋಮಮುನಿ ತಕೆ ಬಂದು ಕಂಡೀ । ಸ್ವಾಮಿಗಳು ಕಂಬಳಿಯಪಾಸುತ ನದಿಯದಾಂಟದರೂ ॥ ಭೂಮಿಯೊಳು ಪೊಸತೆನುತೆ ನಿಜಕರ । ತಾಮರಸಗಳ ಮುಗಿದು ಬಣ್ಣಿಸ । ಲಾಮ ಹತ್ತವಕೇಳಿ ಸರ್ವರು ನುತಿಸತೊಡಗಿದರೂ ॥೩೯॥

ಆಸಮಯದೊಳ್ ಪಂಪೆಯಾಣ್ಮನ । ವಾಸದಿಂದ
ರ್ಚಕರು ಬಂದಾ । ದೋಷಹರ ವಿರುಪಾಕ್ಷನಾಲಯದೊ
ಳಗೆ ಗುರುವರನೂ ॥ ಭಾಸುರದ ಮಹಿಮೆಯನು ತೊ
ರ್ದುದ । ನಾಸಕಲರರಿವಂತೆ ಪೇಳ್ದಾ । ಭೂಸುರರು ಭ
ಯಭಕ್ತಿಯಿಂ ಸಾಷ್ಟಾಂಗ ವೆರಗಿದರೂ ॥೪೦॥

ಧರೆಯ ಜನರಘಕುಳವ ಕಳೆಯಲು । ಕರುಣದಿಂ
ಶಂಕರನೆ ತಾನೀ । ಗುರುಚನ್ನಬಸವೇಶನೆಂಬುವ ನಾಮ
ದೊಳೆ ಬಂದೂ ॥ ಮೆರೆವನಲ್ಲದೆ ಮಿಕ್ಕಲೌಕಿಕ । ನರರಿ
ಗಿಂತಹಮಹಿಮೆಯುಳವಡು । ತಿರುವದೇ ಶಿವನೆಂದು
ನಂಬುವದಖಿಳಸಜ್ಜನರೂ ॥೪೧॥

ದೆಶೆದೆಶೆಯೊಳೈತರುವ ಜನರತಿ । ಪೊಸತಪ್ಪ ಮಹಿ
ಮೆಗಳನುಸುರುತ । ಸಸಿನೆಯಿಂ ಕೀರ್ತಿಸುತ ಸಾಷ್ಟಾಂಗ
ದೊಳೆ ನಮಿಸುತ್ತೆ ॥ ರಸೆಯೊಳೀಗುರುದೇವನನುಪಮ ।
ಜಸವೆತ್ತ ವೈರಾಗ್ಯಧರ್ಮನ । ನುಸುರಲೆಮ್ಮಳವಲ್ಲವಾಗಿ
ರಿಜೇಶನೇಬಲ್ಲ ॥೪೩॥

ಎಂದು ಪಲವಂದದಲಿ ಪೊಗಳುತ । ಮುಂದೆನಿಂ
ದಿರುವನಿತಕಾಜನ । ಸಂದಣಿಯ ಮಧ್ಯದೊಳಗೋರ್ವಂ
ಗನೆಯ ದೇಹದೊಳೂ ॥ ಪೊಂದಿರ್ದ ಭೂತವದು ಪರಿ
ಪರಿ । ಯಿಂದ ಚೇಷ್ಟಿಸಿ ಕುಣಿಯುತಂ ಮನ । ಬಂದತೆರ
ದಿಂ ಕೂಗುತಿರಲಾಕೆಯನು ಪಿಡಿತಂದೂ ॥೪೩॥

ಗುರುವಿನೆದುರೊಳೆ ನಿಲ್ಲಿಸಲ್ಕದು । ಕರಮುಗಿದು
ದುಃಖಿಸಲುತೊಡಗಿತು । ಪರಿಯನೆಲ್ಲವ ಪ್ರೊತಿಳಿಪೀಡಪೆ

ನೆಂದುನುಡಿಯುತಿರೇ ॥ ಕರುಣದಿಂದಾಚನ್ನಬಸವನು । ಪರಮಭಸಿತವ ಧರಿಸಲಾಗಳೆ । ಪಿರಿತಿನಿಯು ಬಯಲಾಯ್ತು ಯುವತಿಗೆ ಅರಿವುಜನಿಸಿತ್ತೂ ॥೪೪॥

ಮೇಲುದವನಾವರಿಸಿಕೊಳುತಾ । ಶೀಲಗುಣಸಂಪನ್ನ ನಮಿಸಿ ನಿ । ಜಾಲಯಕೆ ಗಮಿಸಿದಳು ಸಕಲರು ಸೋಜಿಗವಿದೆಂದು ॥ ಲೀಲೆಮಿಗೆ ಪ್ರತ್ಯಕ್ಷಧರೆಯೊಳು । ನೀಲಕಂಧರನೀತನೆಂದೇ । ಮೌಳಿಯಂ ಬಾಗಿಸುತಬೇಳ್ಪರು ಮನಸಿನೆಣಿಕೆಯನೂ ॥೪೫॥

ವಿಧವಿಧದಿ ಬೇಡುತಿರಲವರಿಗೆ । ಪದುಳದಿಂ ವರವಿತ್ತು ಪಾವನ । ಹೃದಯರಿಗೆ ಶಿವತತ್ವದುಪದೇಶವನುಗಯ್ಯುತ್ತೆ ॥ ಮದನನಧಟಂಗೆಲಿದು ರಾಜಿಪ । ಸದಯನಿಧಿಗುರುಚನ್ನಬಸವನ । ಸದಮಲೋತ್ತಮನೆನಿಪ ಕೀರ್ತಿಯು ಪರ್ಬಿತೀಜಗದೀ ॥೪೬॥

ಯಾವತಾಣದಿ ನೋಡಿದೊಡೆ ಗುರು । ದೇವನನುಪಮಮಹಿಮೆನುತಿಪರು । ತೀವಿದುತ್ಸವದಿಂದೆ ಪದಪದ್ಯದೊಳು ಪಾಡುವರೂ ॥ ಈವಿಧದಪೆಂಪಾಂತು ಶೋಭಿಪ। ಪಾವನಾಂಗಂ ಚನ್ನಬಸವನು । ಮೂವಗಂ ಸಂತಸದಿ ಶಿವನಂ ಭಜಿಸುತೊಪ್ಪಿಹನೂ ॥೪೭॥

ಶಾ. ವಿ. ಶರ್ವಾಣೀ ಗಿರಿರಾಜಮೋಹನಸುತೇ ಗೌರೀ ಸದಾಶಾಂಕರೀ । ಗರ್ವೋದ್ರೇಕವಿಶಿಷ್ಟಮಾಹಿಷಮಹಾದೈತ್ಯೇಂದ್ರವಿಧ್ವಂಸಿನೀ ॥ ಸರ್ವಾದಿತ್ಯಕುಲಾಂಗನಾಪರಿಮಿಳತ್ಸಂಸೇವ್ಯಪಾದಾಂಬುಜೇ । ಉರ್ವೀಯೋಳ್ ಭ್ರಮರಾಂಬೆ ಪಾಲಿಸೆಮಗಿಂ ಸಂಕಷ್ಟಸಂಹಾರಿಣೀ ॥೪೮॥

ಇದುವೆ ಶ್ರೀಗುರು ಚನ್ನಬಸವನ । ಸದಮಲದ ಚಾರಿತ್ರ್ಯವತಿಶಯ । ಮುದದಿ ಪೇಳ್ದಂ ರಾಚವೀಟಿಯ ಶಾಂತವೀರಾಖ್ಯಂ ॥ ಪದುಳದಿಂಕೇಳ್ದವರಬಯಕೆಯ । ನೊದವಿಸುವನಾಮಲ್ಲಿಕಾರ್ಜುನ । ಸದಯಮಾನಸದಿಂದ ಲಿಲ್ಲಗೆಯಂಟನೆಯ ಸಂಧೀ॥೪೯॥

ಇಂತು ಅಷ್ಟಮಾಧ್ಯಾಯಕ್ಕೆ ಮಂಗಲಂ.

## ಅಥ ನವಮಾಧ್ಯಾಯ ಪ್ರಾರಂಭಃ



ಸೂಚನೆ:- ಶಂಕರನ ನೆನೆಯುತ್ತ ಭಕ್ತರ ।
ಸಂಕಟವಕಳೆಯುತ್ತ ಹರುಷದಿ।
ಕಿಂಕಿಣಿಯಕೂಪದೊಳು ನೆಲೆಸು
ತ ಮಹಿಮೆ ನಡೆಸುವರೂ ॥

ಶ್ವೇತನಾಸುಕುಮಾರ ವಿದಳಲು । ಪಾತಕೌಘವಗ ಯ್ದೊಡವರಿಗೆ । ಪ್ರೀತಿಯಿಂ ಶಿವನೊಲಿದನೆಂಬುವ ವ್ಯಾಸ ರುಕ್ತಿಯದೂ ॥ ಭೂತಳದಿಸಿಜಮಾಗೆವೃಜಿನ । ವ್ರಾತಮೆ ನ್ನೊಳಗಿರಲು ಗಣಿಸದೆ । ಜ್ಯೋತಿರೂಪನೆ ಮಲ್ಲಿಕಾರ್ಜು ನನೀಗ ಪಾಲಿಪುದು ॥೧॥

ಗುರುವರನು ಕುಷ್ಟಿಗಿಯಪುರದೊಳು । ಹರುಷ ದಿಂದೊಪ್ಪುತಿರಲಾತನ । ಮೆರೆವ ಮಹಿಮೆಯಕೇಳಿಕಾಂ ಬುವ ತವಕದಿಂ ಜನರೂ ॥ ಪರಸಿಯೊಡನೈತಂದು ಸ್ವಾ

ಮಿಯು । ಚರಣಕವನತರಾಗಿ ತಮ್ಮಯ । ಪರಕೆಗಳ ಬೆಸಗೊಳುತವರಗಳ ಪಡೆವರನವರತಾ ॥೨॥

ಭೂತಗ್ರಸ್ತರುಬಂದು ಗುರುಕುಲ । ನಾಥನಂಘ್ರಿಗೆ ನಮಿಸಲಾಗಳೆ । ಭೀತಿಯಿಂ ಬಿಟ್ಟೋಡುತಿರ್ದದವು ಸಕಲಭೂತಗಳೂ ॥ ಈ ತರದಿ ಪ್ರತಿದಿನದಿ ಪಿರಿತಿನಿ । ವ್ರಾತದಾಜಾತ್ರೆಯದು ನಡೆದುದು । ಭೂತಳದೊಳಿದ ಕಂಡು ಸೋಜಿಗವೆಂದು ನುತಿಸುವರೂ ॥೩॥

ಒಂದುದಿನ ಬಹುಬಡವೆಯಾಗಿಹ । ಸುಂದರಿಯ ದೇಹದೊಳು ಸೇರಿದ । ಬಂಧುರದ ಭೂತವದು ಚೇಷ್ಟಿಸುತಾಗ ಗುರುಮಠದಾ ॥ ಮುಂದೆ ನಿಂದತಿಹಾಸ್ಯಗಯ್ಯುತ । ಲಂದು ನುಡಿದುದು ಸಕಲಭೂತಗ । ಳಂದವಲ್ಲಲೆ ದೇವ ಯುನ್ನನು ಬಿಡಿಪರಾರೆಂದೂ ॥೪॥

ಚೀರುತಂ ಪುಟನೆಗೆದು ಕೆಲದೊಳು । ಪಾರುತಂ ಬಹುತೆರದಿ ನಟಿಸಲು । ಪೌರಜನವದು ಕಂಡು ವಿನಯದಿ ಸ್ವಾಮಿಯಡಿಗೆರಗೀ ॥ ನಾರಿಯಂಗದೊಳಿರ್ದ ಭೂತಮಿ । ದಾರಿಗೆಯು ವಶವಿಲ್ಲ ಕರುಣವ । ಬೀರಿನೀವೀ ಸುದತಿಯಂ ಕಾಪಾಡಬೇಕೆನಲೂ ॥೫॥

ಗುರುವರನು ಮಾಸುದತಿಗಂಟಿದ । ಪರಮಭೂತವ ಪಿಡಿದು ಬಂಧಿಸಿ । ಹರುಷದೊಡನದಕಾಗ ಚೌಡಿಯುವೆಂಬನಾಮದೊಳು ॥ ಕರೆದು ನೀನೀಮಠದಮುಂದಣ ॥ ಮೆರೆವನಿಂಬಸುವೃಕ್ಷದಡಿಯೊಳು । ನಿರುತಮಿಹುದೆಮ್ಮಾಜ್ಞೆ ಮೀರಲ್ಬಾರದೆಂದೆನಲೂ ॥೬॥

ಸಿರಿತಿನಿಯುಮನುದಕೊಪ್ಪಿಯುದರಕೆ । ಪರಿಪರಿಯ ಪಕ್ವಾನ್ನಬಯಸಲು । ಪುರದಜನರಿಂ ದೊರಕುವದು ಸ ದುಪಾಯದಿಂ ನೀನೂ ॥ ಸರಸಮಧುರಾನ್ನವನು ಭಕ್ಷಿ ಸು । ತಿರುವುದೆನಲಾಕ್ಷಣದಿ ನಮಿಸುತ । ತರುವಿನುದರ ದೊಳಡಗಿನಿಂದುದುಮಾಗ ಸಂತಸದೀ ॥೭॥

ತರುಣಿಯಂಗದೊಳರಿವು ಜನಿಸುತೆ । ಗುರುಪದ ಕೆ ನಮಿಸುತ್ತ ತೆರಳಲು । ನೆರೆದಜನರದಕಂಡು ಪರಿಪರಿ ಯಿಂದ ನುತಿಸುತಲೀ ॥ ಧರೆಯೊಳಿಂತಹ ಮಹಿಮರಿಲ್ಲೆ ನು । ತೆರಗಿ ವರಗಳಪಡೆದು ನಡೆದರು । ಮರದೊಳಡಗಿ ದಚೌಡಿಗ್ರಹವದು ಗುಪ್ತರೀತಿಯೊಳೂ ॥೮॥

ಬಸುರಬಾಣಂತಿಯರ ಶಿಶುಗಳ । ಪಶುಗಳಂ ಪಿ ಡಿಯುತ್ತ ಪೀಡಿಸಿ । ಪೊಸಪರಿಯ ಪಕ್ವಾನ್ನಗಳ ಬರಮಾ ಡಿಕೊಳ್ಳುವದೂ ॥ ಸಸಿನೆಯಿಂಗುರುನಾಥನಾಗಳು । ಬೆ ಸಪ ಕಜ್ಜಮನೆಸಗುತಿಪ್ಪುದು । ವಸುಧಿಜನರದಕಂಡು ಸೋಜಿಗವೆಂದು ನುತಿಸುವರೂ ॥೯॥

ಒಂದುದಿನ ಗುರುವರನು ಮಹದಾ । ನಂದದಿಂ ದೀತನುವಧರಿಸುತ । ಬಂದುದಕೆ ಲೋಕೋಪಕಾರವನೆ ಸಗಬೇಕೆಂದೂ ॥ ಛಂದದಿಂ ಸಿಡಶಶಿಯಗ್ರಾಮದ । ಮುಂದೆ ತಮ್ಮಯಮಠದ ಪಾರ್ಶ್ವದೊ । ಳಂದುಕೂಸ ವಖನನಗಯ್ಯಲ್ಬಗೆದು ನಿಜಬಲದೀ ॥೧೦॥

ಕರದಿ ಗುದ್ದಲಿಪಿಡಿದು ತೋಡುತ । ಭರದಿಮೃತ್ತಿ ಕೆತೆಗೆಯಲದರೊಳು । ಪರತರಾಮೃತದಂತೆ ರಾಜಿಪಜಲ

ವು ಪೊರಪೂಣ್ಮೆ ॥ ನೆರೆದಜನರದಕಂಡು ಸಂತಸ । ವೆರಸಿ ವಿಧವಿಧದಿಂದ ಬಣ್ಣಿಸು । ತಿರಲು ಗುರುವರನಾಗ ಕೂಪವ ಕಟ್ಟಿದನು ತಾನೇ ॥೧೧

ಇಂತಲ್ಲದಿನ್ನೊಂದು ಕೂಪವ । ನಂತುಕುಷ್ಟಿಗಿಪುರದಮುಂದೆಸ । ಮಂತುಜನಕುಪಯುಕ್ತಮುಪ್ಪೊಲುಗೈದುಮಾನೆಲೆಯೊಳ್ ॥ ಸಂತಸದೊಳುಪವನವರಚಿಸುತ। ಕಂತುಹರನಿಭಯೋಗಿವರನಾ । ಪ್ರಾಂತದೊಳು ಜಸನೆತ್ತು ರಾಜಿಸುತಿಪ್ಪನೀತೆರದೀ ॥೧೨॥

ಆಸಮುಯದೊಳ್ನಿಡುಶೇಶಿ ಮಠದಿ । ವಾಸಿಸಿದ ಶಿವಲಿಂಗಪೂಜಕ । ದೇಶಿಗನುಕರಿಬಸವಯೋಗಿಯುಬಿಂದು ನಿಗ್ರಹನೂ ॥ ಭಾಸುರಾಂಗನು ಚತುರನುತಿಸುವಿ । ಲಾಸದಿಂದೊಪ್ಪಿರಲು ನೂತನ । ಲೇಸೆನಿಪ ರೂಪಕ್ಕೆ ಮೋಹಿಸಿಯೊಬ್ಬಕಾಮಿನಿಯೂ ॥೧೩॥

ಕಾಮುಪೀಡಿತಳಾಗಿಪರವಶ । ಭಾವದಿಂದೇಕಾಂತನೆಲೆಯೊಳು । ಭಾವೆಯಾದೇಸಿಗಂದೇಹದಸೋಂಕಲೆಳಸಿದೊಡೇ ॥ ಪಾವನಾಂಗನುಸಿಲುಕದಿರಲತಿ । ಸಾವಧಾನದಿ ಕರದಕಿರುವೆರ । ಳಾವನಿತೆಪಿಡಿಯಲ್ಕೆ ಬೆರಳದುಕಳ್ತರಿಸಿ ಬರಲೂ ॥೧೪॥

ತರುಣಿತನ್ನಯ ಕರದೊಳಿರುತಿಹ । ಗುರುವರನವೆರುಕಿರಳ ಕಾಣುತ । ಪರತರಾದ್ಭುತವೆಂದುಚಿಂತಿಸುತಾಗ ದೇಶಿಗನಾ ॥ ಚರಣತಳದೊಳ್ಬಿದ್ದು ನುತಿಪಳ । ಜರೆಕರಿಬಸವೇಶ ಕುಷ್ಟಿಗಿ । ಪುರಿಗೆ ಬಂದಾಚನ್ನಬಸವನಪದಕೆ ಪೊಡವ್ನುಡುತೇ ॥೧೫॥

ನಡೆದ ವಾರ್ತೆಯನರುಪಿತನ್ನಯ । ಕಡೆವೆರಳ ಕೊ
ರತೆಯನುತೋರಲು । ಕಡುದಯದಿಗುರುಚನ್ನಬಸವಂ
ದೇಶಿಗನಸಲುಹೀ ॥ ಮೃಡಮಂತ್ರವರುಪುತ್ತಲಿದನೇ ।
ದೃಢಮನದಿಪಠಿಸೆಂದು ಪೇಳಲು । ಸಡಗರದಿ ಕರಿಬಸವ
ಯೋಗಿಯು ನಂಬಿಭಕ್ತಿಯೊಳೂ ॥೧೬॥

ಗುರುಮಂತ್ರಪಠಿಸುತ್ತಮಿರಲಾ । ಕರದಕಿರುವೆರ
ಳಾಗ ಚಿಗಿತುದು । ಹರುಷದೊನದಕಂಡು ಸರ್ವರುನುತಿ
ಸತೊಡಗಿದರೂ ॥ ತರುಣಿಯುಂಗದಕಃಮುತಾಪವು । ಭ
ರದಿ ಶಾಂತತೆಯೊಂದೆ ಸ್ವಾಮಿಯ । ಚರಣರಜವನುಪೂ
ಸಿಕೊಳುತತಿಭಕ್ತಿಯಿಂದೆರಗೀ ॥೧೭॥

ಅಪರಾಧಕೋಟಿಗಳ ಕ್ಷಮಿಸೆಂ । ದಪರಿಮಿತವಿನ
ಯದೊಳುನುತಿಸುತ । ಶಪಥದಿಂ ಗುರುಪಾದದೆಡೆಯೊಳೆ
ಜೀವಿಸುವೆನೆಂದೂ ॥ ಸುಪಥದೊಡಸಿರಲೊಪ್ಪಿ ಗುರು
ವಿನ । ಕೃಪೆಯುಪಡೆದಳು ಪುರದಜನವೂ । ವಿಪುಲಮಹಿ
ಮೆಯಕಂಡುಕುಪ್ಪಿಗಿವರನಪೊಗಳಿದರೂ ॥೧೮॥

ಕರುಣದಿಂದೇಶಿಗಗೆಮಂತ್ರವ। ನೊರೆಯಲವರದ
ನಂಬಿಜಪಿಸಲು । ಕರದಕಿರುವೆರಳ್ಳೈದೆ ಚಿಗುತುದು ಸೋ
ಜಿಗಮಿದೆಂದೂ ॥ ಚರಣಕೆರಗುತ ಜನರು ತಮ್ಮಯ ।
ವರಮನೋರಥಗಳನು ಪಡೆಯುತ । ಲಿರಲು ಶ್ರೀಗುರು
ಚನ್ನಬಸವನು ಸುಖದೊಳೊಪ್ಪಿಹನೂ ॥೧೯॥

ಇತ್ತಲಾ ಮುಷ್ಟೂರಗ್ರಾಮದೊ । ಳುತ್ತಮನು
ಬಲವಂತಗೌಡನ । ಮತ್ತಕಾಶಿನಿಯನುಜನತಿಬಲಯು

ಕ್ತಗಂಗಪ್ಪಾ ॥ ಸುತ್ತಲಾತ್ಮನ ಕೀರ್ತಿಪರ್ಬಿರೆ । ಚಿತ್ತದೊಳು ಗುರುಪದವ ಭಜಿಸುತ । ಮತ್ತಧಿಕಸುಖದೊಡನೆ ಸೊಗಯಿಸಿದನಖಿಳವೈಭವದಿಃ ॥೨೦॥

ಧರ್ಮತತ್ಪರನೆನಿಸಿ ನಿತ್ಯವು । ನಿರ್ಮಲಾಚರಣೆಯೊಳು ಚರಿಸುತೆ । ಕರ್ಮಹರಶಿವಲಿಂಗಪೂಜೆಯನೊಲಿದುಮಾಡುತ್ತೇ ॥ ಧರ್ಮನಗಮಂದಿರನ ಪರತರ । ಧರ್ಮದೇಳ್ಗೆಯನಾವಕಾಲದಿ । ಕೂರ್ಮೆಯಿಂದಿಃಜಗದಿ ಪಸರಿಸಲೆತ್ನಗಯ್ಯುವನೂ ॥೨೧॥

ಮತಿಯುತನು ಮಾತೆರದೊಳೊಪ್ಪಿರ । ಲತುಳಗುಣನಿಧಿಯನಿಪಮಾವಗೆ । ಕೃತಕಿಗಳು ಪಲತೆರದಿ ಪೀಡಿಸುತಿರಲು ಗಂಗಪ್ಪಾ ॥ ವಿತತಶ್ವಶುರನ ನುಡಿಯ ಮನ್ನಿಸಿ । ಖತಿಯೊಳಾವೈರಿಗಳ ಹತಿಸಲು । ಕ್ಷಿತಿಪತಿಗಳದಕೇಳಿಸಿಡಿಯಲ್ಚಾರರನಟ್ಟಿದರೂ ॥೨೨॥

ಅರಸನಾಳ್ಗಳು ಬರುವರೆಂಬುದ । ನರಿದು ಗಂಗಪನಾಗಕುಷ್ಟಿಗಿ । ಪುರಿಗೆಬಂದಾಚನ್ನಬಸವಸ್ವಾಮಿಗಳ ಕಂಡೂ ॥ ಚರಣಕವನತನಾಗಿ ನುತಿಸಲು । ಗುರುವರನು ಸಂತೈಸುತಾತನ । ಪರಿಯನೆಲ್ಲವತಿಳಿದುಯುಭಯವನಿತ್ತು ಕರುಣದೊಳೂ ॥೨೩॥

ಕೆಲವುದಿನದೊಳೆ ನಿನ್ನಕಷ್ಟಗ । ಳಳಿದು ಸುಖವೊದಗುವದು ಯಿಲ್ಲಿಯೆ । ಬಲುವಿನೋದದೊಳಿರ್ಪುದೆನಲದಕೊಪ್ಪಿ ಗಂಗಪ್ಪಾ ॥ ಮಲರಹಿತಗುರುದೇವನಡಿಗಳ । ನೊಲಿದು ಪೂಜಿಸುತಷ್ಟವರ್ಣನ । ತಿಳಿಯುತನದಿನಸುಖದಿ ಬಾಳುತ್ತಿರ್ದನಾಮಠದೀ ॥೨೪॥

ಒಂದುದಿನ ಗುರುಚನ್ನಬಸವನು । ಮಂದಹಾಸ ದಿ ಗಂಗಪನ ಕರೆ । ದೆಂದರೆಲೆ ನಿನ್ನಖಿಳಬಂಧನವಳಿದವ ದುಕಥದೀ ॥ ಮುಂದೆ ಗ್ರಾಮಣಿಯುನಿಸಿ ವಿಭವದ। ಗೊಂದಣದಿನೆರೆಬಾಳ್ವಿಮಹದಾ । ನಂದದೊಳೆ ನೀಂಪೋ ಗುಗ್ರಾಮಕೆತಳುವದೆಂಗೆನಲೂ ॥೨೫॥

ಯತಿವರನ ನುಡಿಗೇಳಿನಮಿಸುತ । ಲತಿಮುದದಿ ಕೃಪೆವಡೆದು ಗಂಗಪ । ಸಿತಿಗಳನನೆನೆಯುತ್ತ ಮುಷ್ಟು ರುಗಾಮಕೈತಂದೂ ॥ ಸತತ ಗುರುಚರಲಿಂಗಪೂಜಾ। ರತಿಯೊಳಿರುತಿರೆ ಗೆಜ್ಜಿಭಾವಿಯ । ವಿತತಗ್ರಾಮಣಿಗೆಲಸ ದೊರೆತುದದೊಂದುನೆವದಿಂದೇ ॥೨೬॥

ಗುರುನಿರೂಪಣದಂತೆ ಗೌಡಿಕಿ । ದೊರಕಲಾಗಂ ಗಪ್ಪತನ್ನಯ । ತರುಣಿಪುತ್ರರುಸಹಿತ ಕಿಂಕಿಣಿಕೂಪದೊ ಳಗಿರಲೂ ॥ ಮೆರೆವಪರತರಗೃಹವ ಕಟ್ಟಿಸಿ । ಹುರುಷ ದಿಂದಿನಿತೆಲ್ಲಕುಷ್ಟಿಗಿ । ಪುರಿಯುಪಟ್ಟದಚನ್ನಬಸವನ ಕರು ಣಬಲಮೆನುತೇ ॥೨೭॥

ನೆನೆದು ತನ್ನಯ ಮಡದಿಮಕ್ಕಳಿ । ಗನಿತುವಾರ್ತೆ ಯನರುಪಿ ಗಂಗಪ । ನನುನಯದಿ ಕುಷ್ಟಿಗಿಗೆಬಂದಾಗು ರುಗಳಂ ಕಂಡೂ ॥ ವಿನಯದಿಂ ಪೊಡಮಟ್ಟು ದೊರೆತಿ ಹ । ಘನವಿಭವದೇಳ್ಗೆಯನು ಸೂಚಿಸು । ತನಘಮೂ ರ್ತಿಯುವೆರಸಿ ನಿಜಪುರಿಗಾಗ ನಡೆತಂದೂ ॥೨೮॥

ತನ್ನಬಳಗವಕರೆಸಿ ಗುರುವರ । ಚನ್ನಬಸವನಪಾದ ಪೂಜೆಯ । ನುನ್ನತೋನ್ನತಭಕ್ತಿಯಿಂದೆಸಗಿದನು ಗಂಗ

ಪ್ಪ ॥ ಮನ್ನಣೆಯೊಳಾಗೆಚ್ಚಿಭಾವಿಗೆ । ಚನ್ನಸವ ಶಾಖಾ
ಪುರರೆರಡಕೆ । ಸನ್ನುತದ ಮಠಮೊಂದುಕಟ್ಟಿಸಿ ಸ್ವಾಮಿ
ಗೊಪ್ಪಿಸುತೇ ॥೨೯॥

ಆಮಠಕೆ ಸಲುವಂತೆ ರಾಜಿಸ । ಭೂಮಿಯಂ ಪ
ದೆದಿತ್ತು ನಮಿಸಲು । ಸ್ವಾಮಿಯಾಗಂಗಪ್ಪಗನುಪಮಕೃ
ಪೆಯಬೀರುತ್ತೇ ॥ ಪ್ರೇಮದಿಂ ಕೆಲಶಿಷ್ಯರೊಡನಾ । ರಾ
ಮಣೀಯಕಮಠದೊಳಿರುತಂ । ಸೋಮಧರಶಿವಲಿಂಗ
ಪೂಜೆಯನೆಸಗುತಂ ಪೊಲದೀ ॥೩೦॥

ಕರದಿಗುದ್ದಲಿಪಿಡಿದು ಕೂಪವ । ಭರದಿತೋಡಲು
ದೇವಗಂಗೆಯು । ಪರಿಯೊಳೊಪ್ಪುವ ನಿರ್ಮಲೋದಕ
ಪೂರ್ಣತಾಕ್ಷಣದೀ ॥ ಪರಿಪರಿಯ ಶಿಲೆಗಳನು ತರುತದ ।
ಧರೆಗೆ ಪೊಸತೆನೆ ತಾವೆಕಟ್ಟುತ । ಪರಮಕಳವೆಯನಿಕ್ಷು
ಬಾಳೆಯು ಬೆಳೆಯತೊಡಗಿದರೂ ॥೩೧॥

ಕರವೀರ ಸುರಹೊನ್ನೆ ಬಕುಳವ । ಪರಮಬಿಲ್ವಂ
ನಾರಿಕೇಳವ । ಪರಿವಿಡಿದು ಸ್ಥಾಪಿಸುತಸುಂದರವೆನಿಪಬನ
ದೊಳಗೇ ॥ ಹರುಷದಿಂ ಶಿವಯೋಗನಿದ್ರೆಯೊ । ಳಿರುವ
ರೊಂದೆರಳ್ಮಾಸಪೆನ್ನಗ । ಶರಿರದೆಚ್ಚರಮಿಲ್ಲದಚಲಿತಸುಖ
ನನುಭವಿಸೀ ॥೩೨॥

ನಿಜಶಕ್ತಿಯೊಡನೇಳ್ದು ಶಿವನಂ । ಭಜಿಸುತಂಸ್ನಾ
ನಾದಿಕರ್ಮವ । ತ್ಯಜಿಸದನುಪಮಭಕ್ತಿಯಿಂ ಶಿವಲಿಂಗ
ವರ್ಚಿಸುತೇ ॥ ಅಜನಬರಹವಮೀರಿ ಮಾಯೆಯ । ವೃ
ಜಿನದೊಳು ಶಿಲ್ಕದಲೆ ಮದನನ । ಭುಜಬಲವಗೆಲಿದೊ
ಪ್ಪುತಿರ್ದನು ಚನ್ನಬಸವೇಶಾ ॥೩೩॥

ಬಿಳಿಯರೋಮಗಳಡಗಿ ಕಪ್ಪಿಂ । ತೊಳಪಕೇಶಗಳುಣ್ಮಿದವು ಮಾ। ಪಳೆಯತನುವಮಾಜುತ್ತ ಜವ್ವನಪ್ರಾಪ್ತಿಯಾಯಿತ್ತು ॥ ತಿಳಿಯಲೆರಳ್ಮೊವೇಳೆಯಿಾಪರಿ । ಕಳೆಗಳವು ಪಲ್ಲಟಿಸಿ ತೋರಲು । ಇಳೆಯಜನರದಕಂಡು ಸಾದ್ಭುತವೆಂದು ಪೊಗಳಿದರೂ ॥೩೪॥

ಆಯುವುದು ತ್ರೈಶತಗಳಾಗಿರೆ । ಕಾಯಜನಪಳಿಕೈಪರೂಪದಿ । ಆಯತದಿ ಮುನಿನಾಥರಿತ್ತಿಹ ಭಿಕ್ಷಪಾತ್ರೆಯೊಳೇ ॥ ಈಯವನಿಜನರೇನಬೇಡೆ ನಿರಾಯಸದಿ ತೆಗೆದಿತ್ತುತಣಿಪರು । ಬಾಯೊಳುಸುರುವನುಡಿಗಳವುಸಿದ್ಧಾಂತವಾಗುವವೂ ॥೩೫॥

ನುಡಿದುದೇ ಮಹಮಂತ್ರಸಂತಸ । ದೊಡನೆತಿರುಗಿದ ನೆಲಸೆ ಕ್ಷೇತ್ರವು । ಕಡುವಿನೋದದೊಳಾವನಂ ನೆರೆನೋಳ್ಪರಾನರನಾ ॥ ಜಡತನುವು ತೊಲಗುತ್ತಲನುಪಮ। ಸಡಗರದಿ ಬಾಳುತ್ತಲಮರರ । ಗಡಣದೊಳುರಾಜಿಸುವನಂತ್ಯದಿಸ್ವಾಮಿಕೃಪೆಯಿಂದೆ ॥೩೬॥

ಈತನೇ ಭೂಲೋಕಶಂಕರ । ನೀತನೇ ನತಕಲ್ಪಭೂರುಹ । ನೀತನೇ ಕಲುಷಿತರ ಪಾಪವ ಕಳೆಯಬಂದಾತಾ ॥ ಈತನೇ ಭಕ್ತೌಘಪಾಲಕ । ನೀತನೇ ಶಿವತತ್ವಬೋಧಕ । ನೀತನೇ ಶಿವಯೋಗಿಪುಂಗವನೆಂದು ನುತಿಸುವರೂ ॥೩೭॥

ಬುಧರು ಪದ್ಯಾವಳಿಗಳಂಬಹು। ವಿಧದಿ ಬಣ್ಣಿಸುತಿಪ್ಪರಾಗವು । ವಿದರು ಸಾಷ್ಟಾಂಗದೊಳುನಮಿಸುತೆಸ್ಥಳಕುಳಂಗಳನೂ ॥ ಪದುಳದಿಂತಿಳಿಯುತ್ತೆ ತಣಿವರು ।

ಮದನಹರನಿಭಚನ್ನಬಸವನ । ಪದಗಳನುನಂಬಿದರವು
ನಸಿನಕಾರ್ಯಸಿದ್ಧಿಪವೂ ॥೩೮॥

ಇಂತೆಸೆವಶಿವಯೋಗಿವರನೋ । ರಂತೆತಮ್ಮಧಿಕಾ
ರಸೂತ್ರವ । ನಾಂತು ಜಗದೊಳುಮೆರೆವವಟುವಂನೋ
ಡ ಬೇಕೆಂದು ॥ ಸಂತಸದಿ ನಿಜಶಿಷ್ಯವರ್ಗದೊ । ಳಂತೆಲ್ಲ
ವುಡುಕುತ್ತಲುತ್ತವು । ಸಂತತಿಯುಶಿಷ್ಯರಿಹಹಳ್ಳಿಯಕೇರಿ
ಗೈದಿದರೂ ॥೩೯॥

ಅಲ್ಲಿ ಹಿರೆಮಠದಧಿಪನಯ್ಯಪ । ನೆಲ್ಲರೊಳುಗುಣ
ವಂತನಾತಗೆ । ಒಳ್ಳೆಸುತರೇಳ್ವನರುಸಹಿತಂ ಬಳಗದವ
ರೊಡನೇ ॥ ಸಲ್ಲಲಿತಮನ್ನಣೆಯೊಳೊಪ್ಪಿರ । ಲುಲ್ಲಸದಿ
ಚನ್ನಾರ್ಯರ್ನೈತರ । ಲೆಲ್ಲರೆದುರ್ಗೊಂಡಾಗನುನ್ನಿಸಿ ನಮಿ
ಸಿದರು ಮುದದೀ ॥೪೦॥

ಪರಿಪರಿಯುವಿಧದಿಂದ ಪೂಜಿಸಿ । ಹರುಷದಿಂ ಕಾ
ಣಿಕೆಯ ಮುಂದಿ । ಟ್ಟೆರಗದಯ್ಯಪ್ಪನಿಗೆ ಯಮಿಕುಲ
ನಾಥನಿಂತೆಂದಾ ॥ ತರುಳರೊಳು ನಮಗೋರ್ವ‌ರ್ಕುವ
ರನ । ಗುರುಪೀಠದಧಿಕಾರಕೀವುದು । ಪರಮಪೂಜ್ಯನ
ಮಾಳ್ಪೆವೆನಲದಕೊಪ್ಪಿದನು ಶಿಷ್ಯ ॥೪೧॥

ದೇವ ನಿಮ್ಮಯಕರುಣದಿಂದೀ । ಭಾವೆತನುಜರ
ಸಂಪದಾಗಳ । ದಾವಕುವರನಬೇಹುದವನಂ ಕೊಂಬು
ದೆಂದೆರಗೀ । ಸಾವಧಾನದೊಳೆಲ್ಲಮಕ್ಕಳ । ನಾವಿಮಲ
ಗುರುವಿಂಗೆ ತೋರಿಸೆ । ಕೋವಿದನ ಸಲ್ಲಕ್ಷಣಾಂಗನ ಗ್ರ
ಹಿಸಿದರು ಮುದದೀ ॥೪೨॥

ಈತನೆ ಗುರುವಪ್ಪನೆಲ್ಲರು । ಪ್ರೀತಿಯಿಂ ಸಂಪುತಿ ಪುದೆಂದೆನ । ಲಾತುರದಿ ಪೊಡಮುಟ್ಟರನಿಬರು ಕಾಣ್ಕೆಯನು ಕೊಟ್ಟೊ ॥ ಪಾತಕೌಘವ ಕಳೆವಸದ್ಗುರು । ನಾಥ ನಾಮರಿದೇವನೊಡಗೊಂ । ಡೋತು ಕುಷ್ಟಿಗಿಮಠಕೆ ನಡೆತಂದೆಲ್ಲಭಕ್ತರನೂ ॥೪೩॥

ಕರೆಸುತಗಣಿತಶಿಷ್ಯವರ್ಗವ । ಬರಸಿ ಶುಭದಿವಸದೊಳೆ ತಮ್ಮಯ । ಮರಿಗೆ ಪಟ್ಟವಗಟ್ಟಿ ಮುದ್ರೆಯನೊಪ್ಪಿಸಿಧರಾಗ ॥ ನೆರೆದಗಣವರರಿಂಗೆಯುಡುಗರೆ । ಪರಿಸಮರ್ಪಿಸಿ ಸಕಲಜನಕಂ । ಪರಿಪರಿಯುಪಕ್ವಾನ್ನಗಳನೆಡೆ ಮಾಡಿತಣಿಸಿದರೂ ॥೪೪॥

ಪರಿವಿಡಿಯೊಳಾಚನ್ನಬಸವನು । ಮರಿದೇವಗಾನಂದದಿಂದಲಿ । ಕರಿಬಸವಗುರುರಾಜವಡೆಯರರೆಂಬನಾಮವನೂ ॥ ಸ್ಥಿರಗೊಳಿಸಲಲ್ಲಿರವ ಸಕಲರು । ಹರುಷದೊಳು ಕಾಣಿಕೆಯಿನೊಪ್ಪಿಸು । ತೆರಗಲಾಶೀರ್ವದಿಸಿ ಶಿವಭಕ್ತಿಯನು ಬೋಧಿಸುತೇ ॥೪೫॥

ಕಳುಪುತೆಲ್ಲರನಾಗ ಕುಷ್ಟಿಗಿ । ಪೊಳಲನುಳಿದಾಗೆಜ್ಜಿಭಾವಿಗೆ । ಘಳಿಲನೈತಂದಾಗ ಶಿಷ್ಯರ ಸಲುಹಬೇಕೆಂದೂ ॥ ಸಲುವತುರಗಗಳೆತ್ತು ಸೇವಕ । ಬಳಪವೆರಸುತ್ತೀರ್ವಸ್ವಾಮಿಗ । ಳೊಲಿದು ಸಂಚರಗಯ್ಯುತಾನತರಘವ ಕಳೆಯುತ್ತೇ ॥೪೬॥

ಅಲ್ಲಲ್ಲಿ ಶಿವತತ್ವಮಾರ್ಗವ । ನುಲ್ಲಸದಿ ತಿಳುಪುತ್ತೆ ಯತಿಕುಲ । ವಲ್ಲಭರು ನಡೆತಂದರೊಲಿದಾಸಗರಗ್ರಾ

ನುಕ್ಕೆ ॥ ಅಲ್ಲಿರುವ ಕುಂಬಾರನುಠದೊಳ । ಗೆಲ್ಲರೊಡ
ನೆರದಾಗ ನೆಲಸುತ । ಸಲ್ಲಲಿತಶಿವಲಿಂಗಪೂಜೆಯನೆಸಗು
ತೊಪ್ಪಿಹರೂ ॥೪೭॥

ಗುರುಗಳೈದಿದರೆಂಬ ವಾರ್ತೆಯ । ನರಿದುವೂ
ಪುರದಖಿಳಭಕ್ತರು । ಪರಮಫಲಗಳನಾಂತುಬರುತಿರಲಾ
ಗ ಚನ್ನಾರ್ಯರ್ಗಂ ॥ ತರಣಿಯುದಯದಮುನ್ನಶೌಚಕೆ ।
ತೆರಳಿಹರು ಕರಿಬಸವದೇವನು । ದುರಿತಹರಶಿವಲಿಂಗ
ಪೂಜೆಯನೆಸಗುತಿರುತಿರಲೂ ॥೪೮॥

ಬಂದಭಕ್ತರು ಕುಳಿತರನಿತಕೆ । ಛಂದದಿಂದಾಪು
ರದ ಧನಿಕರ । ವೃಂದದೊಳು ಮಿಗಿಲೆನಿಸಿ ಶೀಲವನಾಂ
ತು ಶಾಸ್ತ್ರದೊಳು ॥ ಬಂಧುರಂ ಬಾಳೆಯ ಗುರಪ್ಪನು ।
ಮಂದಹಾಸದಿ ಸ್ವಾಮಿಗಳು ಮನ । ಬಂದಪರಿಯಲಿ ನ
ಡೆವರುತ್ತಮಮಾರ್ಗಮಿನಿತಿಲ್ಲ ॥೪೯॥

ಲಿಂಗಪೂಜೆಯ ಮಾಳ್ಪರೊಮ್ಮೆಯು । ತಿಂಗಳಾ
ದಡು ಯೋಗಗಯ್ವರು । ಜಂಗಮರಿಗಿದುವಿಹಿತವಲ್ಲೆನು
ತಾಪ್ತರೊಳು ನುಡಿದೂ ॥ ಹಾಂಗೆಸರ್ವರುಗೂಡಿ ಯತಿ
ಕುಲ। ಪುಂಗವನ ದರ್ಶನಕೆಬಂದೊಡ । ನಂಗಮದಹರ
ಚನ್ನಬಸವನು ಮುಖವತೊಳೆವುತಿರೇ ॥೫೦॥

ಎಲ್ಲರುಂ ಸಾಷ್ಟಾಂಗವೆರಗಿ ಸ । ಮುಲ್ಲಸಿತಭಕ್ತಿ
ಯೊಳು ನಿಂದಿರೆ । ಮೆಲ್ಲನಾಬಾಳೆಯಗುರಪ್ಪನು ಬಿನ್ನಹ
ವಮಾಡೇ ॥ ಬಲ್ಲಗುರುಗಳು ನುಡಿದಶಾತಗೆ । ಒಳ್ಳೆನಡೆ
ಯಿನಿತಿಲ್ಲನಮ್ಮಗೆ । ಸಲ್ಲದೀಬಿನ್ನಹವಮಾಡಲ್ಬೇಡ ನೀನೆಂ
ದೂ ॥೫೧॥

ಮನೆಯೊಳಾಡಿದ ನುಡಿಗಳೆಲ್ಲವ । ನಿಸಿತುಳಿಯ ದಂತುಸುರೆ ಕೇಳುತ । ಜನರು ವಿಸ್ಮಯಗೊಳಲು ತಲೆ ವಾಗಿಸಿದನಾಭಕ್ತಾ ॥ ಮನವತೊಳೆಯಲ್ಬೇಕು ಹೊಲಸಿ ನ । ತನುವನೆನಿತುಂ ತೊಳೆದೊಡೇನಿಹು । ದೆನುತೆ ತಂಬಿ ಗೆತುಂಬಿನೀರಂ ಕುಡಿದನಾಯತಿಯುೂ ॥೫೨॥

ಪೊರಗೆ ನೀರಂ ಕರ್ನದ್ವಾರದಿ । ಸೆರೆಯೆತಂಬಿಗೆ ತುಂಬಲದಕಂ । ಡರಿದರಿದು ಮೆನುತ್ತೆದೆ ಬಣ್ಣಿಸಿ ನಮಿಸಿ ದರುಜನರೂ ॥ ಬೆರಗುವಡುತೆ ಗುರಪ್ಪ ತನ್ನಯ । ಕರ ಗಳಂ ಮುಗಿದಾಗ ಸ್ವಾಮಿಯ । ಚರಣಕವನತನಾಗಿ ತ ಪ್ಪಾಯ್ತೆಂದು ಬೆಸಗೊಳಲೂ ॥೫೩॥

ತವಕದೊಳುಗುರುವಿಂತುನುಡಿದನು । ಭುವಿಯೊ ಳೀಜಡತನುವ ಧರಿಸಿರ । ಲವಿರತಂ ದೋಷಂಗಳುದಯಿ ಪವಾರಿಗಾದೊಡೆಯೂ ॥ ಶಿವಪೂಜೆಚರಶೇವೆಗಯ್ಯುತ । ಲವನುಕಳೆಯುವನುತ್ತಮನು ಖಲ । ನಿವಹವೇನುಂ ಲ ಕ್ಷಿಸದೆ ಭವಚಕ್ರದೊಳಗಿಹರೂ ॥೫೪॥

ಎಂದೊರೆವ ಗುರುನಾಥನುಕ್ತಿಯ । ನಂದುಕೇ ಳ್ದುಗುರಪ್ಪನಮಿಸುತ । ಮುಂದಮತಿನಾನಿಹೆನುತಿಳಿಯಲ್ಯ ಕ್ತಿನನಗಿಲ್ಲ ॥ ತಂದೆಯೇ ಬಿನ್ನಹವ ಗ್ರಹಿಸುತ । ಬಂದು ಮನೆಗಂ ಮಡದಿಮಕ್ಕಳ । ವೃಂದಕಾಶೀರ್ವದಿಸಿ ಪಾಲಿ ಪುದೆಂದುವಿನಯದೊಳೂ ॥೫೫॥

ಬೇಡಿಕೊಳಲದಕೊಪ್ಪಿ ಸರ್ವರು । ಗೂಡಿಗುರುಗ ಳು ಭಕ್ತನಿಚ್ಛೆಯ । ನಾಡೆಪೂರ್ಣವಮಾಡಿ ಸಗರದಿ ಕೆಲ

ವುದಿನವಿರಲೂ ॥ ರೂಢಿಯೊಳಗಿಂತಪ್ಪ ಮಹಿಮರು । ನೋಡಲೆಲ್ಲಿಯುಮಿಲ್ಲವೆನುತವ । ರಾಡುತಿರಲಾಧರ್ಮ ಪಾಲಕರೆನಿಪ ಸ್ವಾಮಿಗಳೂ ॥೫೬॥

ಕರೆಸಿದರುವಾಪುರದ ಭಕ್ತರಿ । ಗೊರೆದರನುಪಮ ಧರ್ಮಬೋಧೆಯ । ಕರುಣಿಸುತಲಲ್ಲಿಂದ ಮುಂದಕೆ ನ ಡೆದು ಕೆಲವೆಡೆಯೊಳ್ ॥ ಚರಿಸುತಾನತರಘುವ ಕಳೆ ಯುತೆ । ಪರಿಪರಿಯ ರೋಗಗಳಪೊಂದಿದ । ನರರಬಾ ಧೆಯ ಪಿಂಗಿಸುತ ಬರುತಿಹರು ಗುರುವರರೂ ॥೫೭॥

ಭೂತಸೋಂಕಿದ ಮನುಜರಾಯಮಿ । ನಾಥರಡಿ ಗಳಕಂಡು ಪರತರ । ಭೀತಿಯಿಂ ಚೀರುತ್ತ ಪೋದಪೆವೆ ನುತಲೋಡುವವೂ ॥ ಈತೆರದೊಳಲ್ಲಲ್ಲಿ ಮಹಿಮೆಯ । ಖ್ಯಾತಿಮಿಗೆ ತೋರುತ್ತಬಂದರು । ಪ್ರೀತಿಯಿಂದಾಗೆಜ್ಜಿ ಭಾವಿಯಮಠಕೆ ಸ್ವಾಮಿಗಳೂ ॥೫೮॥

ಕರಿಬಸವಯತಿರಾಜಮಹಿಮನು । ಗುರುಚನ್ನಬ ಸವೇಶನೀರ್ವರು । ಪರಮಶಿವಲಿಂಗವನು ಪೂಜಿಸುತಷ್ಟ ವರ್ಣಗಳಾ ॥ ಪರಿಯನರಿದಾಚರಿಸುತನುಭವ । ಸರಸ ಗೋಷ್ಠಿಗಳಾಡುತನುಪಮ । ಹರುಷದೊಡನೊಪ್ಪಿರ್ದ ರಾಶಿನಯೋಗಿಪುಂಗವರು ॥೫೯॥

ಶಾಲಾಶದಳ ವೃತ್ತ. ತ್ರಿದಶಯುವತಿಯರಾದಿಶಕ್ತಿಯಂ ದೊ ಲಿದು ನಯ । ಹೃದಯದಿಂ ನಿನ್ನನುತಿಸುವರು ಶಾಂಕ ರೀ । ಪದುಳದಿಂ ನಿಜಪದವ ನಂಬಿದನೆನ್ನಂಪೀಡಿಪೀ । ವಿಧವಿಧದಕಷ್ಟಗಳ ದಹಿಸೌ ಭ್ರಮರಾಂಬಿಕೆ ॥೬೦॥

ಇದುವೆ ಶ್ರೀಗುರು ಚನ್ನಬಸವನ । ಸದಮಲದ ಚಾರಿತ್ರ್ಯವತಿಶಯ । ಮುದದಿಪೇಳ್ದಂ ರಾಚವೀಟಿಯ ಶಾಂತವೀರಾಖ್ಯಂ ॥ ಪದುಳದಿಂ ಕೇಳ್ವವರ ಬಯಕೆಯ । ನೊದವಿಸುವನಾಮಲ್ಲಿಕಾರ್ಜುನ । ಸದಯಮಾನಸದಿಂದಲಿಲ್ಲಿಗೆ ನವಮಸಂಧಿಗಳೂ ॥೬೧॥

ಇಂತು ನವಮಾಧ್ಯಾಯಕ್ಕೆ ಮಂಗಲಂ.

## ಅಥ ದಶಮಾಧ್ಯಾಯ ಪ್ರಾರಂಭಃ



ಸೂಚನೆ:- ಜಗದೇವಗೌಡನನು ಪಾಲಿಸು । ತಗಣಿತದ ಮಹಿಮೆಗಳ ತೋರುತ । ಸೊಗಸಿನಿಂ ಶಿವನೂರುಯೋಗಿಯನುಡಿಸಿ ಮೆರೆಯುವರೂ ॥

ರುದ್ರದೇವನನೆನಿನ್ನನರ್ಚಿಸಿ । ಭದ್ರಯಾಗವಗೈವರೆಲ್ಲರು । ರುದ್ರಭಾಗವ ಕೊಡದಹೋಮವು ಕೆಡುವುದಿದು ಧಿಟವೂ ॥ ರುದ್ರನೆಲ್ಲಾ ದೇವರಾತ್ಮನು । ಕ್ಷುದ್ರಕಷ್ಟವ ಕಳೆದು ಸಲಹುವ । ರುದ್ರಶ್ರೀಗಿರಿ ಮಲ್ಲಿಕಾರ್ಜುನನಡಿಯಭಜಿಸುವೆನೂ ॥೧॥

ಶರಧಿಮಥನದೊಳುದಿಸಿದಮೃತವ । ಸುರೆಯನಾ ದಿವಿಜರ್ಗೆ ದನುಜರಿ । ಗೆರೆಯುತಿರೆ ನಸುಜಾರಿದಮೃತಂ ಬಿದ್ದುದೀ ನೆಲೆಯೋಳ್ ॥ ಧರೆಯಜನಕಿಷ್ಟಾರ್ಥಫಲಗ

ೞ। ಭರದಿಕೊಡುವಿಯಮೃತಗುಂಡದಿ। ನಿರುತಸ್ನಾನಂ ಗೈದು ಶಿವಮಂತ್ರವನು ಪಠಿಸುವೆನೂ ॥೨॥

ಆಗಳಾಗುರುಚನ್ನಬಸವನು। ರಾಗದಿಂ ಕಿಂಕಿಣಿಯಕೂಪದಿ। ಯೋಗಿವರಕರಿಬಸವದೇವಂ ಸಹಿತವಿರಲಿತ್ತಾ॥ ಭೋಗದೊಳು ಗ್ರಾಮಣಿಯ ಸಂಪದ। ಯೋಗದಿಂ ಮಿಗಿಲೆನಿಸಿ ಮೆರೆಯುವ। ತ್ಯಾಗಗುಣಿ ಜಗದೇವಗೌಡಂ ಜೇರಬಂಡಿಯೊಳೂ ॥೩॥

ಸರಸಗುಣನಿಧಿಯನಿಸಿ ರಾಜಿಸು। ತಿರಲು ಮಾತಗೆ ಪಲವುದಿನದಿಂ। ಪರಮಕಷ್ಟವನೀವುತಿರ್ದುದುಯುದರರೋಗಮುದೂ॥ ಪರಿಪರಿಯಲೌಷಧಗಳಿಂದಂ। ಪರಿಹರಣಮಾಗದಿರೆ ಗೌಡನು। ಗುರುಕುಲಾಗ್ರಣಿಚನ್ನಬಸವನನಾಗ ಕರೆಸಿದನೂ ॥೪॥

ಅನತರ ಪಾಲಿಸುವನಿರುಪಮ। ಜ್ಞಾನಿಯಾಗುರುರು ಚನ್ನಬಸವನು। ಸಾನುರಾಗದಿಬಂದನಾಗಳೆಜೇರಬಂಡಿಂಗೆ॥ ನಿನನುಸುರ್ವೆನು ಸ್ವಾಮಿ ಮನೆಯೊಳು। ತಾನು ಪೊಕ್ಕೊಡೆ ಗೌಡನಂಗದ। ಬೇನೆಯಲ್ಲಂ ಪೋದುದಾಕ್ಷಣ ಸೋಜಿಗಮಿದೆನಲೂ ॥೫॥

ಎಲ್ಲರುಂ ಪೋಡಮಡುತ ಗುರುಕುಲ। ವಲ್ಲಭನ ಕರೆತಂದು ಮಾಸನ। ದಲ್ಲಿ ಕುಳ್ಳಿರಿಸುತ್ತಲೊರೆದರು ರುಜೆಯ ಸಂಗತಿಯಾ॥ ಬಲ್ಲಭಿಷಜರು ವೈದ್ಯಮಿತ್ತೊಡೆ। ಎಳ್ಳನಿತುಸರಿಯದಿಹರೋಗವು। ನಿಲ್ಲದೋಯಿತು ನಿಮ್ಮ ಚರಣವ ಕಂಡಮಾತ್ರದೊಳೇ ॥೬॥

ಎಂದುಸುರಿ ಜಗದೇವಗ್ರಾಮಣಿ । ಯಂದು ಮಹದಾನಂದ ದಿಂದಲಿ । ಬಂದು ಸ್ವಾಮಿಯುಮುಂದೆ ಸಾಷ್ಟಾಂಗದೊಳೆ ನಮಿಸುತ್ತೇ ॥ ತಂದೆಯೇ ನೀವೆನ್ನಮನೆಯೊಳ । ಗೊಂದುಮಾಸದವರೆಗು ಮಹದಾ । ನಂದದಿಂ ಶಿವಲಿಂಗಪೂಜೆಯನೆಸಗುತಿರಬೇಕು ॥೭॥

ಎನಲಿಕಾಚನ್ನಾರ್ಯನೊರೆದನು । ಯನಿತುಲಿಂಗಾಣತೆಯುದಪ್ಪುದೊ । ಮನಿತುದಿನಮಿಲ್ಲಿರುವೆವೆನುತಂ ನಿಂದರಾನೆಲೆಯೋಳ್ ॥ ಮನೆಯೊಳಾಗುರುವಿರುವವರೆಗುಂ । ತನುವಿಗೇನುಂ ಬಾಧೆಯಿಲ್ಲದೆ । ಘನತರಾನಂದದೊಡನಿರ್ದನು ಗ್ರಾಮದಧಿಕಾರೀ ।೮॥

ಕೆಲವುದಿನಮಲ್ಲಿರ್ದು ಗುರುವರ । ನೊಲಿದು ತಮ್ಮಯ ಮಠಕೆಪೋಗಲಿ । ಕೆಳಸಿ ಗೌಡನಿಗರುಪಿ ಸರ್ವರಿಗಭಿಮತವನಿತ್ತೂ ॥ ನಲುಮೆಯಿಂ ಕಿಂಕಿಣಿಯಕೂಪಕೆ । ಮಲಹರಂ ತಾಂ ಬಂದನಿತ್ತಲು । ಬಲುಭಯಂಕರದುದರರೋಗಂ ಪರ್ಬಿತಾಕ್ಷಣದೀ ॥೯॥

ಗ್ರಾಮಣಿಯು ಸಂಕಟವತಾಳದೆ । ಸ್ವಾಮಿಯಂ ಕರೆಸಿದನು ಮತ್ತೆಯು । ಪ್ರೇಮದಿಂ ಗುರುರಾಜನೈದಲುಯಡಗಿತಾಬೇನೆ ॥ ಈಮಹತ್ವವನೇನಬಣ್ಣಿಪೆ । ಭೂಮಿಯೊಳು ಪೊಸತೆಂದು ಸರ್ವರು । ಸೋಮಧರಶಿವನೀತನೆಂದೇ ನುತಿಸಿದರು ಮುದದೀ ॥೧೦॥

ಈತೆರದಿ ಪಲವೇಳೆ ಪರಕಿಸಿ । ಪ್ರೀತಿಯಿಂ ಗುರುದೇವನೆಂದನು । ಭೀತಿಯನು ಪೊಂದದಿರು ಗೌಡನೆ ನಿ

ಚ್ಚವಿಾತೀರ್ಥಂ ॥ ಸಾತಿಶಯ ಭಕ್ತಿಯೊಳು ಸೇವಿಸು । ಭೂತಚೇಷ್ಟೆಯು ರೋಗದುಪಟಳ । ಪಾತಕೌಘವುದಿ, ರ್ದೊಡೆಲ್ಲವು ಬಿಟ್ಟು ಸುಖವಹುದೂ ॥೧೧॥

ಎಂದು ತಿರ್ಥವನಿತ್ತುಮಹದಾ । ನಂದದಿಂ ಸಾಧನವನರುಪುತ । ಲೊಂದೆರಡುದಿನವಿರ್ದುಪೋದರು ಗುರುವಿನಾಜ್ಞೆಯೊಳೇ ॥ ಮುಂದೆರೋಗವುದಿಲ್ಲದಡಗಿತು। ಬಂಧುಬಳಗದಜನರು ಸೋಜಿಗ । ಮೆಂದುಯತಿಪತಿಚನ್ನಬಸವನ ನುತಿಸತೊಡಗಿದರೂ ॥೧೨॥

ಪರಿಪರಿಯ ವೈದ್ಯಂಗಳಿಂದಂ । ಧರೆಯೊಳೆಲ್ಲಾದೇವರಿಂದಂ । ಮೆರೆವ ಜ್ಯೋತಿಷಮಂತ್ರದಿಂದಂ ಪೋಗದಿಹರುಜೆಯೂ ॥ ಗುರುನಿರೀಕ್ಷಣಮಾತ್ರಮಡಗಿತು । ಪರಮಯೋಗಿಯು ಮಠಕೆ ತೆರಳಲು । ತಿರುಗಿಬಂದುದಚೋದ್ಯಮೆನಲಿದನಾರು ಬಣ್ಣಿಪರೂ ॥೧೩॥

ಈಗ ತೀರ್ಥಂಕೊಟ್ಟಮೇಲಾ । ರೋಗಮೆಳ್ಳನಿತಿಲ್ಲದಡಗಿತು । ಯೋಗಿನಾಥನಮಹಿಮೆ ಬಹುಪೊಸತೆಂದುಸಂತಸದೀ ॥ ಆಗ ಕೆಲಬರು ಗೆಜ್ಜಿಭಾವಿಗೆ । ಪೋಗಿಗುರುವಿನ ಕೃಪೆಯಪಡೆದರು । ರಾಗದಿಂ ಜಗದೇವಗೌಡನು ಸ್ವಾಮಿಯಾಜ್ಞೆಯೊಳೇ ॥೧೪॥

ಸೇವಿಸುತ ತೀರ್ಥವನುಗುರುಪದ । ಪಾವನಪರಾಗವನು ಧರಿಸುತ । ಲೀವಿಧದೊಳಿರುತಿರಲಿಕಾತಗೆ ಸಕಲಸಂಪದವೂ ॥ ತೀವಿತನುಪನು ಸುಖದಿ ಬಾಳುತ । ಲಾವಗಂ ಶಿವಯೋಗಿ ಕುಷ್ಟಿಗಿ । ದೇವನಲ್ಲದೆ ಮಿಕ್ಕದೇವರು ಜಗದೊಳಿಲ್ಲೆಂದೂ ॥೧೫॥

ದೃಢಮನದಿನಂಬಿರುವ ನನುಪಮ । ನೃಡನೆಂದು ಗುರುಚನ್ನಬಸವನ । ಜಡರಹಿತ ಶ್ರೀಪಾದಕಮಲವ ಭಜಿಪನನವರತಾ ॥ ಬಿಡದೆಗೌಡನ ಮನೆಯೊಳಿರುತಿಹ । ಮಡದಿ ಮಕ್ಕಳುಸಹಿತ ಸ್ವಾಮಿಯು । ನುಡಿಯುಮೀರದೆ ನಡೆಯುತಿರ್ದಪರಧಿಕ ಭಕ್ತಿಯೊಳೂ ॥೧೬॥

ಜಗದೇವ ಗ್ರಾಮಣಿಯು ವಂಶದಿ । ಸುಗುಣಿಗಳು ಮಿನ್ನೆವರಸ್ವಾಮಿಯೊ । ಳಗಣಿತೋತ್ಸವ ಭಕ್ತಿಯಿಂ ನಂಬಿರುವರನುದಿನದೀ ॥ ಪೊಗಳಲಸದಳ ಮುನಿಪಮಹಿಮೆಯು । ಜಗದೊಳೆಲ್ಲಿಯು ವ್ಯಾಪಿಸುತ್ತಿರ । ಲಘುಹರಂ ಗುರುಚನ್ನಬಸವನುಯೊಮ್ಮೆ ಸಂತಸದೀ ॥೧೭॥

ಗುರುಮಠಕೆ ಚರಮೂರ್ತಿಗಳನೇ । ಪರಿರಚಿಸಬೇಕೆಂದು ಯೋಚಿಸಿ । ಪರಮಮುದ್ದಾನೀಶಯೋಗಿಯ ನೇಮಿಸಿದರಾಗಾ ॥ ಧರೆಯೊಳೊಪ್ಪುವ ವೀರಶೈವರ । ಪರಿಪರಿಯ ಕಾರ್ಯ್ಯಗಳನಡಿಸಲು । ಚರಿಸಬೇಕೈ ಪಟ್ಟಚರವರರೀರ್ವರೊಡಗೂಡೀ ॥೧೮॥

ಎಂದು ನೇಮಿಸಲಾಗಳುಭಯರು । ವಂದಿಸುತ ಪೊರಮಟ್ಟು ಶಿಷ್ಯರ । ವೃಂದಮಂ ಪಾಲಿಸುತಲಷ್ಟಾವರಣಬೋಧೆಯನೂ ॥ ಮಂದಮತಿಗಳಿಗಾದಡಂ ತಿಳಿ । ವಂದದಿಂದರುಪುತ್ತ ಪರತರ । ಬಿಂದುನಿಗ್ರಹರೆನಿಸಿ ಸ್ವಾಮಿಗಳಿಂತು ಚರಿಸುತಿರೇ ॥೧೯॥

ಭೀಮರಥಿನದಿಯೊಂದುತೀರದೊ । ಳಾಮಹಿತಶಿವನೂರು ಖೇಟದ । ಗ್ರಾಮಣಿಯು ಮಂದಿರದಿ ಪೀಡಿಪು

ಬೊಂದುತಿರನದಕೇ ॥ ನೇಮಮಂತ್ರಗಳೆನಿತು ಗಯ್ದೊಡೆ । ಯಾಮಹಾತೊಂದರೆಯು ಬಿಡದಿರೆ । ಭೂಮಿಯೊಳಗಿಹ ಸಿದ್ಧಪುರುಷರಿಗೆರಗಿ ಬೆಸಗೊಳಲೂ ॥೨೦॥

ಕೆಲರು ದೇವರಬಾಧೆಯನುವರು । ಕೆಲರು ಭೂತದಪೀಡೆಯನುವರು । ಕೆಲರು ಗ್ರಹಗಳಕಾಟವೆನುವರು ಮನಕೆಬಂದಂತೇ ॥ ತಿಳಿಸಿ ಬಹುವಿಧದಿಂದ ಪಣಮಂ । ಶಳೆಯುತಿರಲಾಗ್ರಾಮದೊಡೆಯನ । ನಿಳಯದೊಳಗೆಳ್ಳಿನಿತುಶಾಂತಿಯು ತೋರದಿರುತಿರಲೂ ॥೨೧॥

ಇರುಳಪಗಲುಂ ನಿದ್ರೆಪೊರ್ದದ । ತೆರದಿ ಮನೆಯೊಳು ಚೀರುತಿರ್ದುದು । ಸರಸಮಧುರತರಾನ್ನಮುದರಕೆ ಲೇಸನೀಯ್ಯದಲೇ ॥ ಪರಿಪರಿಯವಿಧದಿಂದ ಪೀಡಿಸ । ಪರಮಕಷ್ಟವ ಸೈರಿಸದೆ ಬಹು । ತೆರದವ್ಯಸನದೊಳಾಳ್ದರಾತನ ಮನೆಯಜನರೆಲ್ಲಾ ॥೨೨॥

ಮಲಮಲನೆ ಮರುಗುತ್ತಮಿರಲಾ । ಕಲುಷಹರಗುರುಚನ್ನಬಸವನ । ಪೊಳೆವಕೀರ್ತಿಯ ವಾರ್ತೆಗೇಳ್ದಾಗ್ರಾಮದಧಿಪತಿಯೂ ॥ ಸಲೆಸಮೀಪದಿಶಿಷ್ಯವರ್ಗದೊ । ಳೊಲಿದು ಕರಿಬಸವೇಶರೈತರ । ಲೆಳಸಿಬಂದಾಸ್ವಾಮಿಯಂಘ್ರಿಗೆನಮಿಸಿ ಕೊಂಡಾಡೀ ॥೨೩॥

ಪರಮಗುರುವೇ ಯನ್ನಮನೆಯೊಳ । ಗಿರಲುಸಾಧ್ಯಮದಿಲ್ಲ ಭೀತಿಯ । ತೆರನಪೂರ್ವಮದೇನಗೈದಡುತೊಲಗದೀಕಷ್ಟಂ ॥ ದುರಿತಹರಚನ್ನಾರ್ಯನಿಂದಲೆ । ಪರಿಹರಿಪುದೆಂದೆನುವರೆಲ್ಲರು । ಕರುಣದಿಂದೊಡಗೂಡಿಬಪ್ಪುದುಯತಿಪತಿಯನೀಗ ॥೨೪॥

ಕಾಣಿಕೆಯನೊಲಿದೀವೆನೀಭುಜು । ಮಾಣಿಸಲ್ಬೇಕೆಂದು ಗೌಡನು । ದೀನಭಾವದಿ ಬೇಡಿಕೊಂಡೊಡೆ ಸರ್ವರೊಡಗೂಡೀ ॥ ಜ್ಞಾನನಿಧಿಚನ್ನಾರ್ಯನಿಂತಿಹ । ತಾಣಕಾಗಳೆ ಬಂದು ನಮಿಸುತ । ಸಾನುರಾಗದೊಳಖಿಳವಾರ್ತೆಯ ಪೇಳತೊಡಗಿದನೂ ॥೨೫॥

ನುಡಿಯನಾಲಿಸಿ ಪೇಳ್ದರೀಪರಿ । ಜಡಗ್ರಹದತೆರನಲ್ಲ ಯೋಗಿಯ । ಕಡವರವವಂಚಿಸುತಕವರ್ದಿಹರಿವರು ಮುದುಕಥದೀ ॥ ಕಡುಮೋಹದೊಡನಳಿದ ಸ್ವಾಮಿಯು । ಪಿಡಿದುಪೀಡಿಸುತಿಪ್ಪ ನಾಮನೆ । ಯೊಡೆಯನೇ ನುಂಗ್ಯೆದೊಡಾನಂದವುದುದೊರಕೊಳದೂ ॥೨೬॥

ಎಂದೊರೆಯಲಾಗೌಡನಾರ್ಯನ । ಮುಂದೆಕರಗಳಮುಗಿದು ಮೌನದಿ । ನಿಂದಿರಲು ಕರಿಬಸವಸ್ವಾಮಿಯು ಗುರುವಿನೆದುರಿಂಗೇ ॥ ಬಂದುದೈನ್ಯಂದೋರಿ ಬಹುತೆರ । ದಿಂದ ಪೇಳಿದಡೊಪ್ಪದಾದರು । ತೊಂದರೆಗಳಿದರಿಂದಲಭಿಸುವವೆಂದು ಬೆಸಸಿದರೂ ॥೨೭॥

ಏನುಪೇಳ್ದಡು ಕೆಡುವಕಾಲಕೆ । ಜ್ಞಾನಿಗಾದಡು ಬುದ್ಧಿಭ್ರಮಿಸುವ । ದಾನುಡಿಗೆಯೊಪ್ಪದಲೆಬಲ್ಪಿಂಗುರುವರೇಣ್ಯನನೂ ॥ ಸಾನುರಾಗದೊಳಾಗಸರ್ವರು । ಮಾಣದೊಡಗೂಡುತ್ತ ಬರುತಿರ । ಲಾನದಿಯು ಶ್ರೀಕೃಷ್ಣವೇಣಿಯು ಮಧ್ಯಮಾರ್ಗದೊಳೂ ॥೨೮॥

ರಾಜಿಸುವದತ್ಯಧಿಕಪುಣ್ಯದ । ರಾಜಿಯಿಂ ತನ್ನೊಳಗೆಮಿಂದರಿ । ನೋಜೆಯಿಂನುತಿಸುತ್ತಲುದಕವ ಕುಡಿದ

ಮನಜರಿಗೆ ॥ ರಾಜಭೋಗವನಿತ್ತು ಧರೆಯೊಳು । ತೇಜ ದಿಂ ಮೆರಸುತ್ತಲಂತ್ಯದಿ । ಪೂಜೆಗೊಳುತಿಹದೇವಪದ ವಿಯ ಕೊಡುವುದನವರತಾ ॥೨೯॥

ಬೇಸಿಗೆಯಕಾಲದೊಳಗೆಲ್ಲರು । ಲೇಸೆನಿಸುವಾನದಿ ಗೆಬಂದು । ಲ್ಲಾಸದಿಂ ದಾಂಟುತಿರೆ ಕಂಟಲೆಯುತ್ತುಮಾ ಪೊಳೆಯೋಳ್ ॥ ಈಸದಲೆ ನಸುನೀರೊಳಳಿದುದು। ಈಶ ನಾಣತೆಯಿಂದಲಾಗಳೆ । ಯೀಶಕುನ ನೋಡೆಂದುತಿಳು ಪಿದರಖಿಳಶಿಷ್ಯರಿಗೆ ॥೩೦॥

ಅದನುಲಕ್ಷಿಸವಾಗ ಸರ್ವರು । ಮುದದಿ ಶಿವನೂ ರಿಂಗೆಬರುತಾ । ಚದುರಗೌಡನ ಗೃಹದಿವಾಸವ ಗೈದು ರಾತ್ರಿಯೊಳೂ ॥ ಮದನಹರನಂಪೂಜಿಸುತ್ತಿರೆ । ಪದುಳ ದಿಂದಾಚನ್ನಬಸವನ । ಯದುರೊಳಾಮನೆಯವರ ಪೀಡಿ ಪ ಯೋಗಿತಾಬಂದು ॥೩೧॥

ಗುರುವೆನೀವೀತಾಣದೊಳು ಪುರ । ಹರನಪೂಜಿಸಿ ಮೌನದಿಂದಲಿ । ತೆರಳಬೇಕಲ್ಲದೊಡೆಯಂತ್ರಮಂತ್ರಗಳ ನೆಸಗೀ ॥ ಪರಮಬಂಧನ ರಚಿಸಬೇಡಿರಿ । ಕರುಣ ಮಿರ ಲೆನ್ನೊಡನೆ ನಿಮ್ಮಯ । ಚರಣಕವನತನಪ್ಪೆನೆನಲದಕೊ ಪ್ಪಿದರೂ ॥೩೨॥

ಗುರುವಿನಿಂದಭಿವಚನ ವಡೆಯುತ । ಕರಿಬಸವ ಸ್ವಾಮಿಗಳ ಮೋಹದ । ತುರಗಮಂಕೊಂದಿತ್ತುಗೋಷ್ಟ ದೊಳಾಗಳಲ್ಲಿಂದಾ ॥ ಭರದಿಯುವಪಟ್ಟಾಧಿಕಾರಿಗ । ಳೊರಗಿದೆಡೆಗೈತಂದು ನುಡಿದುದು । ಮರಳಿ ಪೋಗಿರಿ ಗೆಜ್ಜಿಭಾವಿಗೆ ಬರಿದೆಯನ್ನುವನೂ ॥೩೩॥

ಪೀಡಿಸುತ ಕೆಡಬೇಡಿರಿದರಿಂ । ನಾಡೆಬಂಧನವಹು ದು ನಿಮಗೆಂ । ದಾಡಿ ಮದ್ದಾನೀಶಗಿದನೆ ತಿಳುಪಿ ಪೇರ್ದನಿಯುಂ ॥ ಮೂಡಲತಿಭಯದಿಂದಲೆಲ್ಲರು । ಗೂಡಿಚನ್ನಯತೀಶಗರುಪುತ । ನೋಡಬೇಕೆಂದಾಗ ಸ್ವಾಮಿಯ ಸನ್ನಿಧಿಗೆ ಬಂದೂ ॥೩೪॥

ನಡುಗುತ್ತಲೆಲ್ಲವನು ಪೇಳ್ದವ । ರಡಿಗೆ ನಮಿಸಲು ಗುರುವರೇಣ್ಯನು । ಕಡುಮುಳಿದು ನಾಂ ಬೆಸಸಲಿಲ್ಲವೆ ಕೇಳದಾದಿರಲಾ ॥ ಮಿಡಯೋಗಿಮನಸಿಂಗೆ ಕಷ್ಟವ । ಕೊಡಲುಮಿಾತೆರನಾದುದಿವರಿಗೆ । ಬಿಡಿಸಲಸದಳನೇನು ಗಯ್ದೊಡೆ ತೊಲಗದೀಬಾಧೆ ॥೩೫॥

ಎಂದೊರೆಯುವನಿತಕ್ಕೆ ಗೌಡನು । ಬಂದು ಬಹುವಿಧದಿಂದಪೊಗಳುತ । ತಂದೆಯೇಈಬಾಧೆಪಿಂಗುವದಾವಗೆಂದೆನಲೂ ॥ ಮುಂದೆ ಯೋಗಿಯಧನವು ಪೋಗಲಿ । ಕಂದು ಶಾಂತಿಯು ನೆಲೆಸುತಿಪ್ಪದು । ಸಂದೆಗವಪೊಂದುತ್ತ ಸುಮನೆ ತೊಳಲಬೇಡೆಂದೂ ॥೩೬॥

ತಿಳುಪಲಾ ಗ್ರಾಮಣಿಯು ಗುರುಪದ । ನಳಿನಗಳತೊಳೆದಾಪವಿತ್ರತೆ । ಯುಳವಟ್ಟತೀರ್ಥವನು ತುಂಬಿದನೊಂದುಪಾತ್ರೆಯೊಳೂ ॥ ನಿಳಯದೊಳಗದನಿಟ್ಟು ತನ್ನಯ । ಲಲನೆಸುತರಿಂಗೊರೆದನನುದಿನ । ಮಲರಹಿತಮಹದೇವನೆಂದೇ ಪೂಜಿಸುವದೆಂದೂ ॥೩೭॥

ಎಲ್ಲರದಕೊಡಬಡಲು ಗುರುಕುಲ । ವಲ್ಲಭಗೆಕಾಣಿಕೆಯನೀಡಿದ । ನೊಳ್ಳಿತುರಗವನೊಂದನತಿಮುದದಿಂದ ಗ್ರಾಮಣಿಯೂ ॥ ಬಲ್ಲಯೋಗಿಗಳಾಣ್ಮನವರಿಗೆ ।

ಸಲ್ಲಲಿತವರವಿತ್ತು ನಡೆತರ । ಉಲ್ಲಸದಿ ಪೇರ್ಗಹಳೆಭೋ
ರ್ಗರೆಯಿತ್ತು ಮುಂಬಿನೊಳೂ ॥೩೮॥

ಆಗಳೆಲ್ಲರುಗೂಡಿ ಮಾರ್ಗದಿ । ಪೋಗುತಾಮು
ದ್ದಾನೆಸ್ವಾಮಿಗೆ । ರಾಗದಿಂ ಕರಿಬಸವಸ್ವಾಮಿಗಳಿಂತುಪೇ
ಳಿದರೂ ॥ ಶ್ರೀಗುರೂತ್ತಮನಮಿತಮಹಿಮಾ । ಸಾಗರಗೆ
ಪ್ರತಿನುಡಿದಫಲದಿಂ । ದೀಗಳೀಯನುಭವವು ನಮಗಾ
ಯ್ತೆಂದು ಪೊಗಳುತ್ತೇ ॥೩೯॥

ಗುರುನಾಥನೊರೆದಂತೆ ಸಕಲವ । ಪರಿಮುಖದಿ
ಕಾಣಲ್ಕೆ ಬಂದುದು । ಪರತರಾದ್ಭುತಮೆಂದು ಸರ್ವರು
ಚನ್ನಬಸವನನೂ ॥ ಪರಿಪರಿಯ ವಿಧದಿಂದ ನುತಿಸುತ ।
ಭರದಿ ಗೆಜ್ಜಿಯಭಾವಿಮಠದೊಳು । ಪರಿವಾರಸಹಿತಾಗ
ಪೊಕ್ಕರು ಪರಮಸಂಭ್ರಮದೀ ॥೪೦॥

ಸ್ವಾಮಿಗಳು ಕಿಂಕಿಣಿಯ ಕೂಪದಿ । ಪ್ರೇಮದಿಂ
ಕೆಲಕಾಲಮಿರುತಂ । ಭೂಮಿಯೊಳಗೊಂದೊಂದುದೇಶ
ದ ಭಕ್ತಸಂಕುಲಕೇ ॥ ರಾಮಣೀಯಕಧರ್ಮತತ್ವದ ।
ನೇಮವನೆ ತಿಳುವುತ್ತ ಚರಿಸುವ । ನೇಮವಂ ಕೈಕೊಳುವ
ದೆನ್ನುತಲೊಪ್ಪಿಕೊಂಡಾಗ ॥೪೧॥

ಚರಮೂರ್ತಿಮುದ್ದಾನಿಸ್ವಾಮಿಯು । ಹರುಷದಿಂ
ಕುಷ್ಟಿಗಿಯು ವಣಿಗಿರಿ । ಪರಮಮೂದಾಪುರವು ಲಿಂಗನ
ಬಂಡಿ ನಿಡಶಿಶಿಯೂ ॥ ಅರಸನಿಂದೊಪ್ಪುವಮುಧೋಳ
ದ । ಪಿರಿಯಮಠಗಳ ನೋಡುತಲ್ಲಿಹ । ಸರಸಗುಣಿಗಳಿ
ಗೊಲಿದು ಶಿವತತ್ವವನು ಬೋಧಿಸುತೇ ॥೪೨॥

ಅಲ್ಲಲ್ಲಿ ಶೋಭಿಸುವ ಶಿಷ್ಯರ । ನೆಲ್ಲನೆರಪುತ ದೀಕ್ಷೆಯೆಸಗುತ । ಸಲ್ಲಲಿತ ಲಿಂಗಾಂಗದನುಭವವೀತೆರನೊಳೆಂದೂ ॥ ಸೊಲ್ಲಿಸುತಪರವಾದಿವರ್ಗದ । ಹಲ್ಲು ಮುರಿಯುತ ಸಕಲಶಾಸ್ತ್ರವ । ಬಲ್ಲಚರವರನಿಂತುಚರಿಸುತ್ತಿರ್ದನತಿಮುದದೀ ॥೪೩॥

ಇತ್ತಲಾಕರಿಬಸವದೇವನು । ದಾತ್ತಗುಣನಿಧಿಯನಿಸಿ ನಮಿಪರ । ಚಿತ್ತದನುವಂತಿಳಿದು ಪಾಲಿಸುತನುಭವಜ್ಞರಿಗೆ । ಉತ್ತಮದ ಶಿವಮತವ ಬೋಧಿಸಿ । ಮತ್ತಜನರಜ್ಞಾನಕಳೆಯುತ । ಬಿತ್ತಿದರು ಗುರುಧರ್ಮಬೀಜವನೆಲ್ಲೆಡೆಯೊಳಾಗಾ ॥೪೪॥

ರೋಗಗ್ರಸ್ತರಿಗೌಷಧವ ಕೊ । ಟ್ಟಾಗಳೇ ಸಂತಸವಗೈವರು । ಯೋಗಬಲದಿಂ ಯಂತ್ರಮಂತ್ರದ ಸಾಧನಗಳಿಂದೇ ॥ ಮೇಗೆನಿಪ ಭೂತಾದಿಬಾಧೆಯ । ನೀಗಿಸುತಲತ್ಯಂತಕರುಣಾ । ಸಾಗರಂ ತಾನೆನಿಸುತೊಪ್ಪಿದನಿಂತು ಸಂಭ್ರಮದೀ ॥೪೫॥

ಗುರುಚನ್ನಬಸವಾರ್ಯನೊಮ್ಮೆಯು । ಪರಮಶಿವಯೋಗದೊಡನಿರುವಂ । ಪರಿಪರಿಯ ಪರಿಕರವನೆರಪುತ ಲಿಂಗಪೂಜೆಯನು ॥ ವಿರಚಿಸುತ್ತಿಹನೊಮ್ಮೆ ತನ್ನಯ । ಚರಣಕೆರಗಿದ ಭಕ್ತಸಂಕುಲ । ಕ್ಕೊರೆವನುತ್ತಮಧರ್ಮಬೋಧೆಯನಭವಸನ್ನಿಭನೂ ॥೪೬॥

ಇಂತು ಶಿವಭಕ್ತರನು ಸಲಹುತ । ನಂತನುಹಿಮೆಯ ಜಗದಿತೋರುತ । ಕಂತುಕಾಲರ ಗೆಲ್ದನಿರುಪಮ ಶಾಂತಶಿವಯೋಗೀ ॥ ಚಿಂತೆಯಿಲ್ಲದೆ ಸಕಲಜಂಗಮ ।

ಸಂತತಿಯನೊಡಗೂಡಿಪರತರ । ಸಂತಸದೊಳೊಪ್ಪಿಹ
ರು ಗೆಜ್ಜಿಯಭಾವಿಮಠದೊಳಗೇ ॥೪೭॥

ಮಹಾಸ್ರಗ್ಧರಾವೃತ್ತ. ಶಿವೆ ಕಾತ್ಯಾಯನಿದೇವಿ ಸರ್ವಮಂಗಳೆ
ಸದಾ ಸೌಭಾಗ್ಯಸಂವರ್ಧಿನೀ । ಶಿವಲೀಲಾಶ್ರಯಮೂಲೆ
ಭಕ್ತವತ್ಸಲೆ ಮಹಾಸಂಕಷ್ಟಸಂಹಾರಿಣೀ ॥ ಭುವಿಭೃದ್ವಂ
ಶಜೆ ಶೀಲೆ ಜ್ಞಾನಮಂದಿರೆಯುಮೇ ಬೀಜಾಕ್ಷರೀರೂಪಿ
ಣೀ । ತವಕಂ ಬೀರುತೆ ಭ್ರಮರಾಂಬೆ ಪಾಲಿಸೊಲವಿಂ
ಶ್ರೀಶೈಲಪೀಠಾಧಿಪೇ ॥೪೮॥

ಇದುವೆ ಶ್ರೀಗುರು ಚನ್ನಬಸವನ । ಸದಮಲದ
ಚಾರಿತ್ರ್ಯವತಿಶಯ । ಮುದದಿಪೇಳ್ದಂ ರಾಚವೀಟಿಯ
ಶಾಂತವೀರಾಖ್ಯಂ ॥ ಪದುಳದಿಂ ಕೇಳ್ವವರ ಬಯಕೆಯ ।
ನೊದವಿಸುವನಾಮಲ್ಲಿಕಾರ್ಜುನ । ಸದಯಮಾನಸದಿಂದ
ಲಿಲ್ಲಿಗೆ ಪತ್ತುಸಂಧಿಗಳೂ ॥೪೯॥

ಇಂತು ದಶಮಾಧ್ಯಾಯಕ್ಕೆ ಮಂಗಲಂ.

## ಅಥ ಏಕಾದಶಾಧ್ಯಾಯ ಪ್ರಾರಂಭಃ



ಸೂಚನೆ:- ಶಿವನಿರೂಪದತೆರದಿ ಶೋಭಿಸ ।
ಶಿವಲಿಂಗರೂಪೆನಿಸಿಗೋಪಿಯೊ।
ಳವಿರತಂ ಮಹಿಮೆಗಳತೋರು
ವ ಚನ್ನಯತಿವರನೂ ॥

ದೇವನದಿಯಂ ಬಾಲಚಂದ್ರನ | ನಾವಗಂಮುಕು
ಟದೊಳುತಳೆದಿಹ | ಕಾಮನಂಗವದಹಿಸಿಭಸಿತವಕಾಯ
ದೊಳಗಾಂತಾ || ಪಾವಕಾಕ್ಷನು ಶಂಭುಶಂಕರ | ತೀವಿ
ದುತ್ಸವದಿಂದಲೆನ್ನಗೆ | ದೇವಶ್ರೀಗಿರಿಮಲ್ಲಿಕಾರ್ಜುನನೀ
ಗೆ ಮಂಗಲವಾ ||೧||

ರಾಮಚಂದ್ರನು ತನಗೆಲಭಿಸಿದ | ಭೀಮತರಪಾ
ತಕವಕಳೆಯಲು | ಸೋಮಧರಸಂಸ್ಥಾಪಿಸಿದನೀಯಮ್ಮ
ತಗುಂಡದೊಳು || ರಾಮಲಿಂಗನ ಪೆಸರುಬಂದುದು |
ಭೂಮಿಯೊಳಗೀನೆಲೆಯೆಪರತರ | ನೇಮದಿಂದಲಿ ಶಿವನ
ಕೃಪೆಯಂಪಡೆವುದನವರತಾ ||೨||

ಗುರುಚನ್ನಬಸವಾರ್ಯನನುದಿನ | ಪರಮಲಿಂಗ
ವ ಪೂಜಿಸುತಲಾ | ಚರಣತೀರ್ಥವಸಲಿಸಿನೀಡಿದ ಸಕಲ
ಪಾಕವನೂ || ಹರಮಂತ್ರಮುಚ್ಚರಿಸಿ ಪಾವನ | ತರವೆ
ನಿಸಿ ಸವಿಯುತ್ತ ಶರಣರ | ಸರಸವಚನಗಳೋದುತಂ
ಭಕ್ತರಿಗೆ ತಿಳುಪುತ್ತ ||೩||

ಅರ್ಚನೆಯು ಅರ್ಪಣವು ಅನುಭವ | ನಿಚ್ಚಲುಂ
ತಪ್ಪದಲೆಮಾಡುತ | ಸ್ವಚ್ಛಮನಸಿನೊಳೊಲಿದು ಶಂಕರ
ಭಕ್ತಿಯನು ಜಗಕೆ || ಪೊಚ್ಚಪೊಸತೆನೆ ಬೋಧಿಸುತಜನ |
ರಿಚ್ಛೆಯ ನಡಿಸುತ್ತೆ ಮಹಿಮೆಯಿ | ನಚ್ಚರಿಯು ಗೊಳಿಸು
ತ್ತ ಶೋಭಿಸುತಿಪ್ಪ ಸಮಯದೊಳೆ ||೪||

ಆಮಹಾ ಗೊಬ್ಬೂರೊಳೊಪ್ಪುವ | ಸ್ವಾಮಿಬೂ
ದಿಯಬಸವದೇವನ | ಶ್ರೀಮಹಿತ ಚಾರಿತ್ರ್ಯಮೆಂತೆನಲ
ಮರಸುರದುರ್ಗಾ || ಗ್ರಾಮದೊಳಗವತರಿಸಿ ಭಕ್ತಿಯ |



ಗೆಜ್ಜೀಭಾವಿ ಸೀಮೆಯಲ್ಲಿರುವ ಶ್ರೀಚನ್ನಬಸವಸ್ವಾಮಿಗಳ ಸಮಾಧಿಯು. ಮತ್ತು ಶಿಲಾಮಂಟಪವು.

ನೇಮದಿಂದನವರತ ಚರಿಸುತ | ರಾಮಣೀಯಕ ಮಹಿ
ಮೆತೋರಿಹರವನು ತಿಳುಪುವಡೆ ||೫||

ವರಪುರಾಣದಮೊಳ್ಕೆಯುಹುದದ | ನೊರೆವಸಮ
ಯಮದಿಲ್ಲ ಸ್ವಾಮಿಯು | ಶರಿರಮಂ ಸುರದುರ್ಗದೆಡೆ
ಯೊಳಗಡಗಿಸುತೆ ಮತ್ತೆ || ಹರುಷದಿಂ ಗೊಬ್ಬೂರುಭ
ಕ್ತರ | ಪರಿಮುಖದಿ ಕಾಣಿಸುತಲಲ್ಲಿಯು | ಪರಮಗೋ
ಪಿಯಗೈಸಿ ಸೇರಿದರಿಂತು ಮಹಿಮೆಯೊಳೂ ||೬||

ಬೂದಿಬಸವೇಶ್ವರನು ಈಪರಿ | ಸಾದರದಿ ಪರಿಪೂ
ಜ್ಯನೆನಿಸುತ | ಮೇದಿನಿಯೊಳತ್ಯಂತಕೀರ್ತಿಯಕಾಯದಿಂ
ದಿಹನೂ || ಆದಯಾನಿಧಿಯುಮಳಕರದೊಳ | ಗೈದೆಜನಿ
ಸಿಹನಭವಭಕ್ತಿಯು | ಸಾಧುಗುಣಸಂಪನ್ನ ಪಂಚಾಕ್ಷರಿ
ಯ ದೇಶಿಗನೂ ||೭||

ಇವರು ಗುರುಬೋಧೆಯನು ಬಯಸುತ | ತವ
ಕದಿಂ ಶ್ರೀಚನ್ನಬಸವನ | ಪ್ರವಿಮಳದ ಪದಗಳನು ಕಂ
ಡತಿಭಕ್ತಿಯಿಂ ನಮಿಸೀ | ಭವಹರನೆ ನೀವೆನಗೆ ಪ್ರೇಮ
ದಿ | ಶಿವಮಂತ್ರವರುಪುತ್ತ ಪಾತಕ | ನಿವಹಮಂ ತಳೆ
ದೀಗ ಪಾಲಿಸಬೇಕು ತಳುವದಲೇ ||೮||

ಎಂದು ಬಿನ್ನಯಿಸಲ್ಕೆ ಗುರುವರ | ನಂದು ಕಾರು
ಣ್ಯವನು ಬೀರುತ | ಚಂದದಿಂ ಶಿವಮನುವ ಬೋಧಿಸಿ
ಸಕಲಮರ್ಮವನೂ || ಸಂದೆಗವು ಜನಿಸದೊಲೆ ತಿಳು
ಪುತ | ಮುಂದೆ ನೀನಿದರಿಂದ ಘನತೆಯ | ಪೊಂದಿಸುಖಿ
ಸುವಿ ಸಕಲಸಂಪದಸಿದ್ಧಿಸುಗು ಧಿಟದೀ ||೯||

ಇಂತು ಕರುಣಿಸಲದನು ಕೇಳ್ದತಿ । ಸಂತಸದಿ ಸಾಷ್ಟಾಂಗನೆರಗುತ । ನಂತವಿಧದಿಂ ನುತಿಸಿ ಭಕ್ತಿಯೊಳಾಗ ನಮಿಸುತ್ತೀ ॥ ಭ್ರಾನ್ತಿಮಯದಜ್ಞಾನಕಳೆದುನಿ । ತಾಂತಮೆನ್ನೊಳಗಿರ್ದ ಪರತರ । ಕಾಂತಿಮಯಲಿಂಗದವಿಚಾರವ ತೋರ್ದಗುರುದೇವಾ ॥೧೦॥

ನೀನೆ ಜಗದಾಧಾರ ಶಂಕರ । ನೀನೆ ಪರಕಾರುಣ್ಯಸಾಗರ । ನೀನೆ ದೇವರದೇವ ನಘವನದಾವ ಜಿತಕಾವಾ ॥ ನೀನೆಶರಣಾಗತರಪಾಲಿಪ । ಜ್ಞಾನನಿಧಿನಿನ್ನಡಿಯ ನಂಬಿದ । ಮಾನವನೆ ಪರಿಪೂಜ್ಯನೆನಿಸುವನೀಧರಿತ್ರಿಯೊಳೂ ॥೧೧॥

ಎಂದುಪಲವಂದದಲಿನುತಿಸುತ । ಲಂದು ಲಿಂಗಾಂಗದಬೆಡಂಗನು । ಛಂದದಿಂ ತಿಳಿದಾಗಪಂಚಾಕ್ಷರಿಯತೀಶ್ವರನೂ ॥ ಬಂದುತನ್ಮಯ ಮಠದೊಳನುದಿನ । ಮಿಂದುಧರನಂ ಪೂಜಿಸುತಗಣ । ವೃಂದದಿಂಗಿತವರಿತು ದಾಸೋಹವನು ಮಾಡುತ್ತೆ ॥೧೨॥

ಚರಣಕೆರಗಿದಭಕ್ತವರ್ಗದ । ಪರಿಪರಿಯ ಕಷ್ಟಗಳಕಳೆಯುತ । ಹರುಷದಿಂ ಶ್ರೀಬೂದಿಬಸವನ ಯಾತ್ರೆಯನುಗಯ್ದೂ ॥ ಅರಸುಜನರೆದುರಿನೊಳೆ ತೇರನು । ಕರದಿ ಸಂಜ್ಞೆಯಮಾಡಿ ನಡೆಸಿದ । ನೆರೆದಜನರದನೋಡಿ ಸೋಜಿಗವೆಂದು ಬಣ್ಣಿಸಲೂ ॥೧೩॥

ಮಣಿಪುರದೊಳಾದೇಶಿಗೇಂದ್ರನು । ಮಣಿಯರಂ ಮಹಿಮೆಗಳ ನಡೆಸುತ । ಗಣಿಸಲಸದಳವೆನಿಪಭೂತಗ್ರಸ್ತರಂ ನೋಡೀ ॥ ಕ್ಷಣದೊಳಗೆ ಬಿಡಿಸುತ್ತ ಶಾಂತಿಯ ।

ನನುಗೊಳಿಸಿ ಪರಿಪಾಲಿಸುತ್ತಿರೆ । ಜನರು ಭಕ್ತಿಯೊಳಾ ತನಂಘ್ರಿಗೆನಮಿಸಿ ನುತಿಸುವರೂ ॥೧೫॥

ಇತ್ತಲಾ ಕಿಂಕಿಣಿಯಕೂಪದಿ । ನಿತ್ಯದಂತೆಯೆ ಚ ನ್ನಬಸವನು । ಮೃತ್ಯುಹರನಂಪೂಜಿಸುತೆ ತನ್ನೊಳಗೆತಾಂ ತಿಳಿದೂ ॥ ಪೊತ್ತುಬಂದಿಹಜಡಶರೀರವ । ಮತ್ತೆನಿತುದಿನ ಕಾಯ್ದುಕೊಂಡಿರ । ಲುತ್ತಮುದಫಲಮಿಲ್ಲ ಶಿವಸುಖ ಪೊಂದುವದೆ ಘನವೂ ॥೧೫॥

ಎಂದದನೆ ನಿರ್ಧರಿಸಿ ಕುಷ್ಟಿಗಿ । ಯಿಂದ ಚರಕು ಲಪತಿಯುಮುತ್ತೆಯು । ಸುಂದರನು ಕರಿಬಸವಯೋಗಿ ಯು ಕರೆಸಿಕೊಂಡಾಗಾ ॥ ಮುಂದೆ ನಡೆಯುವ ಮಾರ್ಗ ದನುವಂ । ಛಂದದಿಂತಿಳುಪುತ್ತ ಸೇವಕ । ವೃಂದದೊಡ ನಿನ್ನೊರ್ಮ್ಮೆ ಭಕ್ತರಕಂಡು ಬರಲೆಳಸೀ ॥೧೬॥

ಮೂರುಜನರೊಂದೊಂದು ಅಶ್ವಗ । ಳೇರುತಂ ಕಂಟಲೆಯವೃಷಭಗ । ಳಾರವದ ಪೇರ್ಗಹಳೆ ಗಿಡಿಬಿಡಿ ಮುಖ್ಯವಾದ್ಯಗಳಾ ॥ ಓರಣಿಸಿಕೊಂಡಲ್ಲಿಗಲ್ಲಿಗೆ । ದಾರಿ ಯೊಳಗಿಹ ಭಕ್ತವರ್ಗಕ । ಪಾರಕೃಪೆಯಿಂದಿಷ್ಟಫಲಗಳ ನೀವುತಂ ಮುದದೀ ॥೧೭॥

ಸುರಪುರಕೆ ಬಂದಲ್ಲಿಕೆಲದಿನ । ಮಿರುತೆ ಶಳ್ಳಿಗೆ ಯಿಂದ ಶಾಲ್ಮಲಿ । ಪುರಕೆನಡೆತರಲಲ್ಲಿಗಲ್ಲಿಗೆ ಭಕ್ತರೈತಂ ದೂ ॥ ಚರಣಕವನತರಾಗಲೆಲ್ಲರಿ । ಗೊರೆವರುದುವೇ ಕಡೆಯದರ್ಶನ । ಮರೆಯಬೇಡಿರಿ ನಿಚ್ಚಶಿವನುಡಿಪರಿಸ ಬೇಕೆನುತೇ ॥೧೮॥

ಆಗಳಾಕಿಂಕಿಣಿಯುಕೂಪಕೆ । ರಾಗದಿಂ ಪರಿವಾರ ಸಹಿತಂ । ಯೋಗಿವರನೈದಿಂತು ಕರಿಬಸವಾದಿಶಿಷ್ಯರನೂ ॥ ಬೇಗದಿಂ ಕರತಂದುಬೆಸಸಿದ । ರೀಗಗಣತೃಪ್ತಿಯನುಮಾಡಲು । ಭೋಗದ್ರವ್ಯವನೆಲ್ಲಸಿದ್ಧತೆಗಯ್ಯಬೇಕೆಂದೂ ॥೧೯॥

ಗುರುನಿರೂಪಣೆಯಂತೆ ತ್ವರಿತದಿ । ಪರಿಪರಿಯ ಪಕ್ವಾನ್ನರಾಶಿಯ । ವಿರಚಿಸುತಲಲ್ಲಲ್ಲ ವಿನಿಯೋಗಕ್ಕೆ ಭಕ್ತರನೂ ॥ ತರತರಂಗೊಳಿಸುತ್ತೆ ನಿಲ್ಲಿಸಿ । ಚರಸಮೂಹವ ಕರೆಸಲಾಗಳೆ । ಹರುಷದಿಂದಾಪ್ರಾಂತದೊಳಗಿಹ ಜಂಗಮಾವಳಿಯೂ ॥೨೦॥

ಬಂದು ಶುಚಿಯಾಗುತ್ತಲೆಲ್ಲರು । ಛಂದದಿಂ ಸಾಲ್ಗೊಂಡುಕುಳಿತಿರ । ಲಂದುಗಣವರರಿಚ್ಛೆಯೇನಿಹುದದನೆ ಯಡೆಮಾಡೀ ॥ ಮುಂದೆನಿಂದಾಸ್ವಾಮಿಗಳು ಗಣ । ವೃಂದದುದರಂತುಂಬಿ ಸಾಕೆನೆ । ಮಂದಹಾಸದಿ ನೀಡುತಿರ್ದರು ಕೊಳ್ಳಿರೆಂದೆನುತೆ ॥೨೧॥

ಜಂಗಮಾವಳಿಯುಂಡುದಣಿದುದು । ಮಂಗಳಾತ್ಮಕಚನ್ನಬಸವನು । ಪಿಂಗದೆಲ್ಲಾಗಣಸಮೂಹಕೆ ದಕ್ಷಿಣವ ಕೊಡಿಸೀ ॥ ಅಂಗಮಂ ಲಿಂಗದೊಳಗಡಗಿಸಿ । ಭಂಗವಿರಹಿತ ಸುಖದಸುಗ್ಗಿಯ । ಸಂಗದೊಡನಿರಲೆಳಿಸಿ ಗುರುವರನಾಗ ಸಂಭ್ರಮದೀ ॥೨೨॥

ಸ್ನಾನವನು ವಿರಚಿಸುತ ಪರತರ । ಜ್ಞಾನನಿಧಿಶಿವಪೂಜೆಗೃಹದೊಳ । ನೂನಭಕ್ತಿಯನಾಂತು ಪೊಗುತಂ

ಗರ್ದುಗೆಯುಮೇಲೆ ॥ ಸಾನುರಾಗದಿಕುಳಿತು ಭರ್ಗನ। ಧ್ಯಾನಿಸುತಲುಪಕರಣವೆಲ್ಲವ । ತಾಣವರಿದಲ್ಲಲ್ಲಿ ನೆಲೆಗೊಳಿಸುತ್ತೆ ದೃಢಮನದೀ ॥೨೩॥

ಗುರುವಿನಡಿಗಳಭಜಿಸಿ ಲಿಂಗಕೆ । ವಿರಚಿಸುತೆಸ್ನಾನವನು ಭಸಿತವ । ಪರಮರುದ್ರಾಕ್ಷಿಗಳನಂಗದಿ ಧರಿಸಿಕೊಂಡಾಗಾ ॥ ಭರದಿ ಪ್ರಾಣಾಯಾಮನ್ಯಾಸವ । ವರನಿಗಮವಿಧಿಯಂತಿರೆಸಗುತ । ಹರುಷದಿಂ ಶ್ರೀರುದ್ರನಮಕಂ ಚಮಕಸಹವಾಗೀ ॥೨೪॥

ಪುರುಷಸೂಕ್ತದಿ ಲಿಂಗದೇವಗೆ । ಪರಿಮಳಿಪಮಂತ್ರಾಂಬುವೆರೆಯುತ । ಹರುಷದಿಂಗಂಧಾಕ್ಷತಂಮಹಬಿಲ್ವಬನ್ನಿಗಳಾ ॥ ಕರವೀರ ಸುರಹೊನ್ನೆಪಾಟಲಿ । ಇರವಂತಿಶೇವಂತಿ ಬಕುಲವು । ಪರಿಪರಿಯ ಪುಷ್ಪಗಳ ಧರಿಸುತೆಸಿಂಗರಂಗೊಳಿಸೀ ॥೨೫॥

ಮಗಮಗಿಪ ಧೂಪವಸಮರ್ಪಿಸಿ । ಪೊಗರೊಗುವದೀಪಗಳ ಕರ್ಪುರ । ವಗಣಿತದ ನೀರಾಜನಂಗಳನೆತ್ತಿಪಾಡುತ್ತೇ ॥ ಬಗೆಯೊಳತ್ಯಾನಂದವಹಿಸುತ । ಸೊಗಸುತಿಹನಾಸಾಗ್ರನೋಟದಿ । ಬಗೆಬಗೆಯ ಪದ್ಯಗಳಪಠಿಸುತನುತಿಸತೊಡಗಿದರೂ ॥೨೬॥

ಗಿಳಿಯದೇರಸುನಡರ್ದುಕರ್ಬ್ಬಿನ । ಚಲುವಕೋದಂಡಕ್ಕೆ ತುಂಬಿಯ । ಕುಳದಪೆದೆಯಂ ತೊಡರ್ಚುತ್ತೈಸರಲಿಂದಲೆಸೆಯುತ್ತೇ ॥ ಸಲೆಭುಜವಚಪ್ಪರಿಪಮದನನ। ನಳಿಕನಯನದಿ ನೋಡುತೊಂದೇ । ಘಳಿಗೆಯೊಳು ದಹಿಸಿರ್ದಪರತರದೇವ ಜಯಜಯತೂ ॥೨೭॥

ಮರಣಭಯದಿಂ ಮುನಿಕುಮಾರನು । ಪರಮಶಿವಲಿಂಗವನು ಪೂಜಿಸು । ತಿರುವಸಮಯದೊಳಂತಕಂ ಪಾಶವನು ಬೀರಲ್ಕೆ ॥ ಭರದಿ ಲಿಂಗವನಪ್ಪಿದಣುಗನ । ಪೊರೆದು ಮುದಿಸಿದ ದಂಡಧಾರಿಯು । ನುರುಪಿ ಭಕ್ತೋದ್ಧಾರಿಯನಿಸಿದ ದೇವಜಯಜಯತೂ ॥೨೮॥

ತಾರಕಾಕ್ಷನು ಕಮಲನಯನನು । ವೀರವಿದ್ಯುನ್ಮಾಲಿಯಂಬುವ । ಮೂರುಜನರಕ್ಕಸರು ಮೂರ್ಮಲೆತಾಗಸದೊಳಿರಲೂ ॥ ಶೌರಿಯಂ ಮಾರ್ಗಣಮನೆಸಗಿ ಗ । ಭೀರಜ್ವಲನಾಕ್ಷಿಯೊಳೆ ದನುಜರ । ಪೌರಸಹಿತಂ ದಹಿಸಿದನುಪಮ ದೇವಜಯಜಯತೂ ॥೨೯॥

ಮಾಯೆಗಾಶ್ರಯವೆನಿಸುತಾದಿಯ । ಮಾಯೆಯಿಂ ಬೆಳಗುತ್ತ ಜಡವಹ । ಮಾಯೆಯನು ಪೊರ್ದದಲೆ ಮಾಯಾಸೂತ್ರದಿಂ ಜಗದೀ ॥ ಮಾಯೆಯನುಮುಂದಿಟ್ಟು ಭೌತಿಕ । ಕಾಯಯುತರಿಗೆ ಕಾಣದಿರುತಿಹ । ಮಾಯೆವಿರಹಿತಮಲ್ಲಿಕಾರ್ಜುನದೇವಜಯಜಯತೂ॥೩೦

ಸರ್ವಜ್ಞ ಸರ್ವಗತಶರ್ವನೆ । ಸರ್ವಜಗದಾಧಾರಮೂರ್ತಿಯೆ । ಸರ್ವದಾ ನಿನ್ನಮಲಚರಣವನಂಬಿನೆನೆಯುವರಾ ॥ ಸರ್ವಕಷ್ಟಗಳನ್ನು ದಹಿಸುತ । ಸರ್ವತೋಮುಖದಿಂದಪಾಲಿಪ। ಸರ್ವಮಂಗಳೆಯಾಣ್ಮನನುಪಮ ದೇವಜಯಜಯತೂ ॥೩೧॥

ಇಂತುಶಿವನಂ ಭಜಿಸುತಂಮುನ । ದಂತರಾಳದೊಳಾವಸಂಶಯ । ಮಂತಳೆಯದೊರಹೊಳಗೆ ಸಿವಮಯ

ನಾಗಿ ನಿಶ್ಚಲದೀ । ಭ್ರಾಂತಿಯಿಲ್ಲದೆಪೂರ್ಣಸುಖವನು ।
ಶಾಂತಿಯಿಂ ಪೊಂದಲ್ಕೆಹವಣಿಸು । ತಂತೆಶಿವಶಿವಪಾರ್ವ
ತೀ ಪತೆಜಯತುಜಯತೆಂದು ॥೩೨॥

ಕ್ಷೀರದೊಳುಕ್ಷೀರವದು ಬೆರದೊಲು । ನೀರೊಳಗೆ
ನೀರಡಿಗಿದೊಲುಘನ । ಸಾಗಮನಲನಸಂಗದಿಂತೊಳಗು
ತ್ತಲಡಗುವ್ರೊಲೂ ॥ ಭೂರಿಗುಣಮಣಿ ಚನ್ನಬಸವನು ।
ಶ್ರೀರಮಾಕರಲಿಂಗದೊಳ್ಸುವಿ । ಚಾರ ಮುಖದಿಂದಡಗಿ
ಮೆರೆದನು ಶಿವನಸಭೆಯೊಳಗೇ ॥೩೩॥

ಸ್ಥೂಲತನುವಂ ಪೂಜಿಸುತಗಣ । ಜಾಲವಾಗಳೆ
ಶಿವಸಮಾಧಿಯ । ನಾಲಲಿತ ಮನೆರಚಿಸಿ ದೇಹವ ಗೋ
ಪಿಯೊಳಿರಿಸಿ ॥ ಶೀಲಯುತಕರಿಬಸವದೇವನು । ಮೂಲ
ಸ್ಯಮಿಲ್ಲದಲೆ ಚರರಿಗೆ । ಲೀಲೆಯಿಂ ತೃಪ್ತಿಯನು ಗಯ್ಯು
ತ ಸುಖದೊಳೊಪ್ಪಿಹನೂ ॥೩೪॥

ಚನ್ನಬಸವಂ ಗೋಪಿಯೊಳಗಿರ । ಲಿನ್ನುವುಂಮಹಿ
ಮೆಗಳುನಡದಿವೆ । ರನ್ನವಸಿರೊಳಗಿವರಸಮವಿಲ್ಲೆನಿಪ
ಭಕ್ತಿಯೊಳೂ ॥ ಭಿನ್ನವಿಲ್ಲದೆನಂಬಿನುತಿಸುವ । ಗುನ್ನತದ
ಸಂಪದವು ಲಭಿವುದು । ನನ್ನಿಯಿದುಸಟೆಯಾಗದೆಂದಿಗು
ಶಿವನಕೃಪೆಯಿಂದೆ ॥೩೫॥

ವರಪುರಾಣದೊಳೊಂದುಸಂಧಿಯ । ಸರಸಮಹಿ
ಮೆಯೊಳೊಂದನಿದರೊಳು । ಮೆರೆವಪದ್ಯದೊಳೊಂದು
ಪದ್ಯವಕೇಳ್ದಮಾನವನಾ ॥ ಸಿರಿಯುಸುಖಸಂತಾನವಾ
ಯುವು । ಪರಿಪರಿಯುಸಂಪದವು ಪೆರ್ಚುತ । ಧರೆಯೊ
ಳುತ್ತಮವೆನಿಪಕೀರ್ತಿಯುನಾಂತು ಬಾಳುವರೂ ॥೩೬॥

ಆವಗ್ರಾಮದೊಳಾವವೀಥಿಯೊ । ಳಾವಮನೆಯೊ
ಳಗಾವಮನುಜನು । ಸಾವಧಾನದಭಕ್ತಿಯಿಂದೀಚರಿತೆ
ಪೂಜಿಸುತೆ ॥ ತೀವಿದುತ್ಸವದಿಂದ ಪಠಿಸುತ । ಭಾವಶು
ದ್ಧದಿಬರೆಯುತೋದುತ । ಲಾವನೊಪ್ಪುವನವನಮನಸಿ
ನಬಯಕೆ ಸಿದ್ಧಿಪುದೂ ॥೩೭॥

ಕೊರಡು ಕೊನರಲಿಬರಡುಹಯನವ । ನಿರುತಗರೆ
ಯಲಿ ಸುತರಬಯಸುವ । ತರುಣಿಯುರಮನದಂತೆಮ
ಕ್ಕಳು ಜನಿಸಲೀಜನರಾ ॥ ಪರಿಪರಿಯ ಬಯಕೆಗಳು ಸಿ
ದ್ಧಿಸ । ಲರಸರೊಲುಮೆಯು ದೇವರನುಪಮ । ಕರುಣ
ಮಿರಲೀಚರಿತೆಯೋದುವಕೇಳ್ವಮನುಜರಿಗೆ ॥೩೮॥

ಭುವಿಜಲಾನಲಮರುತನಾಗಸ । ಕುವಲಯಾಪ್ತಂ
ರವಿಯುಮಾತ್ಮರು । ಮವಿರತಂ ಚ್ಯುತಿಯಿಲ್ಲದೊಪ್ಪುವ
ತೆರದೊಲೀಚರಿತೆ ॥ ಪ್ರವಿಮಲತೆಯಿಂ ಮೆರೆಯಲೆಂದಾ।
ಶಿವನತನುವಂ ನೆನೆಯುತೀಸುಹ । ಕವಿತೆಯನು ಸಂಪೂ
ರ್ಣಗಯ್ವೆನು ಗುರುಕೃಪಾಬಲದೀ ॥೩೯॥

ಇದರೊಳುಂ ಛಂದಸಿನದೋಷವು । ಪುದಿದಿರಲು
ಮದನೆಲ್ಲತಿದುರ್ಗತ । ಬುಧರು ಶುದ್ಧತೆಗಯ್ವುದೀಕೃತಿಪೂ
ರ್ಣದಯದಿಂದೆ ॥ ಸದಯುಗುರುಚರಿತೆಯನು ವಿರಚಿಪ।
ಮುದವಪೆರ್ಚಿರೆ ರಚಿಸಿದೆನುನಾಂ । ನಿದನುಬಲ್ಲನಿತಖಿಳ
ಸಜ್ಜನರೊಲಿದು ಲಾಲಿಪುದೂ ॥೪೦॥

ಪದಿನೆಂಟುನೂರಿಂದಮೇಲಿಂ । ದೊದವಿದೈವತ್ತೈ
ದುಶಕದೋ । ಳ್ಪಿದಿತಶ್ರೀಮುಖದಬ್ದ ಫಾಲ್ಗುಣಕೃಷ್ಣಪ

ಸ್ಥಿಯೊಳು ॥ ಬುಧವಾರದನುರಾಧತಾರೆಯು । ಸುದಿನ ದೊಳ್ಗುರುಚರಿತೆಸಂತಸ । ಮೊದಗೆಮಂಗಲವಾಗಿಬೆಳೆ ದುದು ಗುರುಕೃಪೆಯೊಳಿಂತೂ ॥೪೧॥

ಕವಿ,ರಾ. ವೃ, ಸುಮನಸವಂದಿತ ಪಾದಪಯೋರುಹೆ ದುರ್ಘ ದೂರೆ ಮನೋನ್ಮನಿಯೆ । ವಿಮಲೆ ವಿಭಾಕರತೇಜವಿರಾ ಜಿತೆ ಕೋಮಲಶಾಮಲದೇಹಯುತೇ । ಯಮಿಕುಲ ಮಾನಸಮಂದಿರೆ ಶಾಂಕರಿಪಾತಕಹಾರಿಣಿ ಪಾರ್ವತಿಯೆ । ಭ್ರಮರಾಂಬೆಯೆ ನಿಜಪಾದಕೆನಮಿಸೀ ಮಂಗಲಗೈನೆ ನೀಕೃತಿಯಾ ॥೪೨॥

ಇದುವೆಶ್ರೀಗುರುಚನ್ನಬಸವನ । ಸದಮಲದಚಾ ರಿತ್ರ್ಯವತಿಶಯ । ಮುದದಿಪೇಳ್ದಂ ರಾಚವೀಟಿಯಶಾಂತ ವೀರಾಖ್ಯಂ ॥ ಪದುಳದಿಂಕೇಳ್ವವರ ಬಯಕೆಯ ನೊ ದವಿಸುವನಾ ಮಲ್ಲಿಕಾರ್ಜುನ । ಸದಯಮಾನಸದಿಂದ ಲಿಲ್ಲಿಗೆ ಪನ್ನೊಂದನೆಯಸಂಧೀ ॥೪೩॥

ಇತಿ ಶ್ರೀಗುರು ಚನ್ನಬಸವ ಪುರಾಣವುಹನ್ನೊಂದುಸಂಧಿ
(೫೦೨) ಪದ್ಯಗಳಿಂದ ಮಂಗಲವಾಗಿಬೆಳೆದುದು.

ಓಂ ಶ್ರೀಶೈಲನಿವಾಸೀ ಭ್ರಮರಾಂಬಾ
ಸಹಿತ ಮಲ್ಲಿಕಾರ್ಜುನಾಯ
ನಮಃ

S. P. Y. 1000-16-1-4F.

# ಗುರುಪರಂಪರೆಯ ಮಹಿಮೆ.

ಮಹಿಮರಾದ ಚನ್ನಬಸವಸ್ವಾಮಿಗಳು ಲಿಂಗೈಕ್ಯರಾದ ಮೇಲೆ ಅಧಿಕಾರಿಗಳಾಗಿರುವ ಕರಿಬಸವಸ್ವಾಮಿಗಳು ಶಿವಯೋಗಸಾಧನವನ್ನು ಬಲ್ಲವರಾಗಿ ಲಿಂಗಪೂಜಾನಿಷ್ಠರೆನಿಸಿ ಸ್ವಾಮಿಯ ಗದ್ದುಗೆಯನ್ನು ಗೆಜ್ಜಿಭಾವಿಯಲ್ಲಿ ಭವ್ಯತರವಾಗಿ ಕಟ್ಟಿಸಿ ಲಿಂಗೈಕ್ಯರಾದರು ಇವರ ಕರಕಮಲೋದ್ಭವರು ಶ್ರೀ ಚನ್ನಬಸವ ಸ್ವಾಮಿಗಳು, ಇವರು ಅಧಿಕಾರವನು ಪಡೆದು ಇಂದ್ರಿಯ ನಿಗ್ರಹದಿಂದಲೂ ವಿರತಿಯ ವೈಭವದಿಂದಲೂ, ಸದಾಚಾರಶೀಲಗಳಿಂದಲೂ, ಲೋಕಪೂಜ್ಯರೆನಿಸಿ ಗೆಜ್ಜಿಭಾವೀಮಠವನ್ನು ನಿಡಶಶಿಯ ಮಠವನ್ನು ಲೆಕ್ಕವಿಲ್ಲದೆ ಹಣವನ್ನು ಖರ್ಚು ಮಾಡಿ ಕಟ್ಟಿಸಿರುವರು, ಆಚಾರವಿಹೀನರನ್ನ ಸೇರುತ್ತಿರಲಿಲ್ಲ, ಒಬ್ಬರನಾಶ್ರೈಸಿ ಕಿಂಕರತೆಯಿಂದ ಯಾಚಿಸಲಿಲ್ಲ ಇವರ ಶಿವಪೂಜಾ ನಿಷ್ಠೆಯ ಪ್ರಕಾಶದಿಂದ ಅನೇಕ ಕಾರ್ಯಗಳು ಸುಖರೂಪದಿಂದ ಸಾಗುತ್ತಲಿದ್ದವು ದಾನ ಧರ್ಮ ಪರೋಪಕಾರ ಮಾಡುವದರಲ್ಲೀಗ ಇವರ ಸಮಾನರೇ ಸಿಗುವದಿಲ್ಲ ಇವರನ್ನು ಕಂಡಕೂಡಲೇ ಭೂತಗ್ರಸ್ತರು ಭೀತಿಯಿಂದ ನಡುಗುತ್ತ ನಮಿಸಿ ಹೋಗುತಿದ್ದರು ಎಷ್ಟೋ ಭೂತಗಳು ಬಿಟ್ಟು ಓಡಿಹೋದವು, ಒಮ್ಮೆ ಈ ಸ್ವಾಮಿಗಳು ಗಜೇಂದ್ರ ಗಡದಿಂದ ಕಾಲಕಾಲೇಶ್ವರ (ಕಳಕ ಮಲ್ಲೇಶ್ವರನ) ಸ್ಥಲಕ್ಕೆ ಹೋಗಿರಲು ಅಲ್ಲೊಬ್ಬ ಪಾಮರನು ಅಡಿಗೇ ಮಾಡುತ್ತ ಚುಟ್ಟಾ ಸೇದುತ್ತ ಕುಳಿತಿರುವದನ್ನು ಕಂಡು ತಮ್ಮಾ ಶಿವಭಕ್ತನಾದ ನೀನು ಗಣಪ್ರಸ್ತಿ, ದೇವರ ನೈವೇದ್ಯಕ್ಕಾಗಿ ಮಾಡುತ್ತಿರುವ ಅನ್ನವನ್ನು ಮಡಿಯಿಂದಲೇ ಮಾಡಬೇಕು, ಹೀಗೆ ಅಪವಿತ್ರತೆಯಿಂದ ಮಾಡಬಾರದೆಂದು ಹೇಳಲವನು ಹೊಂಬತನದಿಂದ ಮಡಿಮಡಿಯೆಂದು ಮಡಿದು ಹೋಗುತ್ತಿರುವರೆಂದು ತಿರಸ್ಕರಿಸಿದನು, ತುಸುಹೊತ್ತಿನಲ್ಲವನು ತನ್ನ ಪಂಜೆಯನ್ನು ದೊಡ್ಡ ಗುಂಡಿನಮೇಲೆ ಒಣಗಾಕಿದ್ದನ್ನು, ಕೆಳಗೆ ನಿಂತು ಜಗ್ಗಲಾಗುಂಡು ಅವನಮೇಲೆ ಬಿದ್ದು ಮಡಿದನು, ಅದನ್ನು ಕಂಡು ನೆರೆದವರೆಲ್ಲರು ಸ್ವಾಮಿಗಳಿಗೆ ತಿರಸ್ಕಸಿದ ಫಲವೆಂದು ನಾನಾವಿಧದಿಂದ ಸ್ವಾಮಿಗಳ ಮಹಿಮೆಯನ್ನು ಬಣ್ಣಿಸಿದರು ಇತ್ಯಾದ್ಯನೇಕಗಳನ್ನು ಪ್ರತ್ಯಕ್ಷ ಕಂಡಿರುವವನ್ನೆ ಲಿಖಿಸುತ್ತಾ ಹೋದರೆ ಮತ್ತೊಂದು ಪುರಾಣವಾಗುತ್ತಿದೆ, ಅವನ್ನೆಲ್ಲ ಪದ್ಯರೂಪದಿಂದ ಪುರಾಣದಲ್ಲಿ ಸೇರಿಸಬೇಕೆಂದು ಕೆಲವರ ಅಭಿಮತವಿತ್ತು ಸಂಪೂರ್ಣ ಮಂಗಲಮಾದೀಪುರಾಣದಲ್ಲಿ ಸೇರಿಸಲು ಬಾರದಂತಾಯಿತು ಶ್ರೀಗುರುಗಳ ಪ್ರಕಾಶದ ಬಲದಿಂದ ಮುಂದಿನ ಚಾರಿತ್ರ್ಯ ವೊಂದನ್ನು ಬರೆಯ ಬಹುದು, ಈಮಹಾನು ಭಾವರಾದ ಶ್ರೀಗುರುಚನ್ನಬಸವ ಸ್ವಾಮಿಗಳು, ಶ॥ ೧೮೩೭ ಯುವನಾಮ ಸಂವತ್ಸರ ಮಾ॥ ಬ॥ ೪॥ ಉದಯದಲ್ಲಿ ಗೆಜ್ಜಿಭಾವೀ ಮಠದಲ್ಲಿ ಲಿಂಗೈಕ್ಯರಾದರು, ಅದೇದಿವಸ ಜಾಗಟಕಲ್ಲ ಪ್ರಮುಖ ರಾಜಪ್ಪನವರಿಗೆ ದರ್ಶನಕೊಟ್ಟು

ನಾವು ಕುಪ್ಪಿಗೆ ಹೋಗುವೆವೆಂದು ಸೂಚಿಸಿದಂತೆ ಇಂಥಾ ಪುಣ್ಯವುಳ್ಳ ಶಿವಸ್ವರೂಪಿಗಳನ್ನಗಲಿದುದಕ್ಕೆ ನಮ್ಮ ಸಮಸ್ತ ವೀರಶೈವ ಸಮಾಜಕ್ಕೆ ಅತ್ಯಂತ ವ್ಯಸನವಾಗಿದೆ. ಈ ವ್ಯಸನವನ್ನು ದೂರುಮಾಡಿ ಮುಂದಿರುವ ಮರಿಗಳಿಗೆ ವಿದ್ಯಾ, ಬುದ್ಧಿ, ವಿಚಾರ, ಶಿವಪೂಜಾ ನಿಷ್ಠತೆ, ಪೂಜ್ಯತೆಯ ಯೋಗ್ಯತಾ ಕರ್ತವ್ಯ ಧರ್ಮಾಭಿವೃದ್ಧಿಯ ಅಭಿಮಾನ, ಇತ್ಯಾದಿ ಗುಣಗಳನ್ನು ಕೊಟ್ಟು ಪ್ರಖ್ಯಾತಿಗೆ ತರಬೇಕೆಂದು ಜಗನ್ನಿಯಾಮಕನಾದ ಶಂಕರನನ್ನು ಕುರಿತು ಅನನ್ಯ ಭಕ್ತಿಯಿಂದ ಬೇಡಿಕೊಳ್ಳುವೆವು.

# ಶುದ್ಧಾಶುದ್ಧ ಪತ್ರಿಕಾ.

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೧ | ೧೭ | ಮರ್ಧ | ಧರ್ಮ |
| ೩ | ೧೯ | ಯಂಕೃತಿ | ಕೃತಿಯಂ |
| ೮ | ೫೫ | ರಮಓಂಕಾರೇಶ್ವರ | ಪರಮಓಂಕಾರೇಶ್ವರ |
| ೧೩ | ೧೧ | ಪ್ರಭುತೆಮಗಿರೆ | ಪ್ರಭುತ್ವತೆಮಗಿರೆ |
| ೧೯ | ೨೨ | ಬಣಿಪ | ಬಣ್ಣಿಪ |
| ೨೨ | ೩ | ಜೇದ್ಭವ | ಜೋದ್ಭವ |
| ೩೩ | ೧೨ | ಪೀಠಮಂ | ಮಠಮಂ |
| ೩೪ | ೩ | ಕಪ್ಪಿ | ಕುಪ್ಪಿ |
| ೩೭ | ೨೧ | ಪರಿವರ್ಮ | ಪರಿಮರ್ಮ |
| ೪೦ | ೧೦ | ಪೂರ | ಪುರ |
| ೪೧ | ೨ | ಚತ | ಚುತ |
| ೪೩ | ೧೨ | ತವಳ | ತಳವ |
| ೪೧ | ೯ | ಸೇಸೆಯನು | ಸೇವೆಯನು |
| ೫೫ | ೧೧ | ಮಹಿಮೆಯನುಪೊಡೆ | ಮಹಿಮೆನುತಿಪೊಡೆ |
| ೫೭ | ೧೫ | ಪೈಳಲದಥ | ಪೇಳಲಸದಳ |
| ೫೮ | ೩ | ತಿಪಸುತ್ತ್ರೆ | ಪಠಿಸುತ್ತ್ರೆ |
| ೫೮ | ೨೨ | ವಿನಯದೊರಲು | ವಿನಯದೋರಲು |
| ೫೯ | ೧೧ | ವ್ಯಾಪಾಸವನವ | ವ್ಯಾಪಾರವನು |
| ೫೯ | ೧೫ | ದೆರಕದಿರೆ | ದೊರಕದಿರೆ |
| ೬೧ | ೭ | ಮಹಂಸವ | ಮಂದಹಾಸವ |
| ೬೧ | ೧೫ | ಸಟ | ಸಟೆ |

| | | | |
|---|---|---|---|
| ೬೨ | ೧೧ | ಥನಕ | ಧನಿಕ |
| ೬೨ | ೧೪ | ಘನದಂದದಂದತೆ | ಘನವರಂದ್ರತೆ |
| ೬೫ | ೬ | ಪ್ರಿಮ | ಪ್ರೇಮ |
| ೬೪ | ೧೮ | ಸೆಂಬು | ನಂಬು |
| ೬೯ | ೧೯ | ಚಲುನೂಸ್ನೆತ್ರಿ | ಚಲುವಕೂಸನ್ನೆತ್ರಿ |
| ೬೬ | ೨೧ | ಕೆರಡಿ | ಕರಡಿ |
| ೯೭ | ೧೬ | ಯಾನಡವ | ಯಾನನವ |
| ೬೯ | ೧೩ | ವೆಚ್ಚುತ್ತ | ಮೆಚ್ಚುತ್ತ |
| ೭೩ | ೩ | ನಿಮಭಾವದಿಂ | ನಿರ್ಮಲಭಾವದಿಂ |
| ೭೩ | ೨೧ | ಕೆದವು | ಕದವು |
| ೭೬ | ೯ | ಗಡ್ಡ | ಗುಡ್ಡ |
| ೭೬ | ೧೭ | ಸೆಲಿ | ಸೆಲ |
| ೭೮ | ೧೧ | ಬಂನವನಿಂ | ಬಂದನು[illegible]ಸಿಂ |
| ೭೮ | ೧೫ | ಭಸದೊಳು | ಭರದೊಳು |
| ೭೯ | ೧೭ | ಭಿಕ್ಷಪಾಪಾತ್ರೆ | ಭಿಕ್ಷಾಪಾತ್ರೆ |
| ೮೦ | ೨೭ | ಪ್ರೊತಿಳಿಪೀದಪೆ | ತಿಳಿಸಿಪೋದಪೆ |
| ೮೨ | ೯ | ಕೆಳೆಯುತ್ತ | ಕಳೆಯುತ್ತ |
| ೮೩ | ೪ | ತಿರ್ದದವು | ತಿರ್ದವು |
| ೮೫ | ೧೪ | ದೇಶಿಗಂದೇಹದ | ದೇಶಿಗನದೇಹದ |
| ೮೫ | ೨೦ | ಕಿರುಕಿರುಳ | ಕಿರುಬೆರಳ |
| ೮೭ | ೨೨ | ನಿನದಿನ | ತನುದಿನ |
| ೮೮ | ೮ | ಗಾಮ | ಗ್ರಾಮ |
| ೮೯ | ೧೮ | ಸುಖ | ಸುಖವ |
| ೯೧ | ೨ | ಸಿದ್ಬಿಪವು | ಸಿದ್ಧಿಪವು |
| ೯೧ | ೧೪ | ಟೈರಗದಯ್ಯಪ್ಪ | ಟೈರಗಿದಮ್ಯಪ್ಪ |
| ೯೩ | ೧೩ | ಲಲ್ಲಿರವ | ಲಲ್ಲಿರುವ |
| ೯೨ | ೧೯ | ಬಳಪ | ಬಳಗ |
| ೯೭ | ೧ | ಕೊಡುವಿ | ಕೊಡುವೀ |
| ೪೭ | ೧೩ | ಗುರುರು | ಗುರು |
| ೧೦೪ | ೧೫ | ಸುಮನೆ | ಸುಮ್ಮನೆ |
| ೧೦೮ | ೧೯ | ರಿಚ್ಛಿಯು | ರಿಚ್ಛೆಯು |

ಸಮಾಪ್ತಂ

